بسم الله الرحمن الرحيم

ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವ ಅಲ್ಲಾಹನ ನಾಮದಿಂದ

# ಇಸ್ಲಾಮನ್ನು ಅರಿಯಲು ಒಂದು ಸಂಕ್ಷಿಪ್ತ ಸಚಿತ್ರ ಮಾರ್ಗದರ್ಶಿ


## ಐ. ಎ. ಇಬ್ರಾಹೀಮ್

**ಮುಖ್ಯ ಸಂಪಾದಕರು**

ಡಾ। ವಿಲಿಯಂ (ದಾವೂದ್) ಪೀಚಿ

ಮೈಕಲ್ (ಅಬ್ದುಲ್ ಹಕೀಂ) ಥೋಮಸ್

ಟೋನಿ (ಅಬೂ ಖಲೀಲ್) ಸಿಲ್ವೆಸ್ಟರ್

ಇದ್ರೀಸ್ ಪಾಮರ್

ಜಮಾಲ್ ಝುರಾಬಾರ್ಝೋ

ಅಲಿ ಅಲ್‌ತಮೀಮಿ

**ವಿಜ್ಞಾನ ಸಂಪಾದಕರು**

ಪ್ರೊ। ಹೆರಾಲ್ಡ್ ಸ್ಟುವರ್ಟ್ ಕೂಫಿ

ಪ್ರೊ। ಎಫ್. ಎ. ಸ್ಟೇಟ್

ಪ್ರೊ। ಮಹಜೂಬ್ ಒ. ತಾಹಾ

ಪ್ರೊ। ಅಹ್ಮದ್ ಅಲ್ಲಾಮ್

ಪ್ರೊ। ಸಲ್ಮಾನ್ ಸುಲ್ತಾನ್

ಸಹಾಯಕ ಪ್ರೊ। ಎಚ್. ಒ. ಸಿಂದಿ

ಕನ್ನಡಾನುವಾದ:

**ಮುಹಮ್ಮದ್ ಹಂಝಾ ಪುತ್ತೂರು**

# Copyright



# For Reprinting

Reprinting or reproducing this book as a whole on the condition that absolutely no change, addition, or omission is introduced is permitted free of charge. To make high quality reprints, you may contact the author to obtain free copies of the computer print files of this book.

# The Web Site of This Book

This entire book, as well as more information on Islam, is available online at:

**www.islam-guide.com**

# ಒಳಪುಟಗಳಲ್ಲಿ

## ಅಧ್ಯಾಯ 3

# ಪೀಠಿಕೆ

ಈ ಪುಸ್ತಕವು ಇಸ್ಲಾಮನ್ನು ಅರಿಯುವುದಕ್ಕಿರುವ ಒಂದು ಸಂಕ್ಷಿಪ್ತ ಮಾರ್ಗದರ್ಶಿಯಾಗಿದೆ. ಇದು ಮೂರು ಅಧ್ಯಾಯಗಳನ್ನು ಹೊಂದಿದೆ.

ಮೊದಲನೆ ಅಧ್ಯಾಯವಾದ, **'ಇಸ್ಲಾಮ್ ಸತ್ಯವೆಂಬುದಕ್ಕೆ ಕೆಲವು ಪುರಾವೆಗಳು'**, ಜನರು ಕೇಳುವಂತಹ ಈ ಕೆಳಗಿನ ಪ್ರಶ್ನೆಗಳಿಗೆ ಉತ್ತರವನ್ನು ನೀಡುತ್ತದೆ:

- ಕುರ್‌ಆನ್ ನಿಜವಾಗಿಯೂ ದೇವನಿಂದ ಅವತೀರ್ಣಗೊಂಡ ದೈವಿಕ ವಚನಗಳಾಗಿವೆಯೇ?
- ಮುಹಮ್ಮದ್(ﷺ)[1]ರು ನಿಜವಾಗಿಯೂ ದೇವನಿಂದ ಕಳುಹಿಸಲ್ಪಟ್ಟ ಪ್ರವಾದಿಯಾಗಿರುವರೇ?
- ಇಸ್ಲಾಮ್ ನಿಜವಾಗಿಯೂ ದೈವಿಕ ಧರ್ಮವಾಗಿದೆಯೇ?

ಈ ಅಧ್ಯಾಯದಲ್ಲಿ ಆರು ವಿಧ ಪುರಾವೆಗಳನ್ನು ಮಂಡಿಸಲಾಗಿದೆ:

**1) ಪವಿತ್ರ ಕುರ್‌ಆನ್‌ನಲ್ಲಿರುವ ವೈಜ್ಞಾನಿಕ ಪವಾಡಗಳು:** ಹದಿನಾಲ್ಕು ಶತಮಾನಗಳ ಹಿಂದೆ ಅವತೀರ್ಣಗೊಂಡ ಪವಿತ್ರ ಕುರ್‌ಆನ್‌ನಲ್ಲಿ ಪ್ರಸ್ತಾಪಿಸಲಾದ, ತೀರಾ ಇತ್ತೀಚೆಗೆ ಸಂಶೋಧಿಸಲಾಗಿರುವ ಕೆಲವು ವೈಜ್ಞಾನಿಕ ಸತ್ಯಗಳನ್ನು (ಸಚಿತ್ರವಾಗಿ) ಈ ವಿಭಾಗದಲ್ಲಿ ಚರ್ಚಿಸಲಾಗಿದೆ.



**(2) ಪವಿತ್ರ ಕುರ್‌ಆನ್‌ನ ಅಧ್ಯಾಯಗಳಂತಿರುವ ಒಂದು ಅಧ್ಯಾಯವನ್ನು ರಚಿಸಿ ತರಲು ಒಂದು ಮಹಾ ಸವಾಲು:** ಕುರ್‌ಆನ್‌ನ ಅಧ್ಯಾಯಗಳಂತಿರುವ ಒಂದು ಅಧ್ಯಾಯವನ್ನು ರಚಿಸಿ ತರುವಂತೆ ದೇವನು ಕುರ್‌ಆನ್‌ನಲ್ಲಿ ಸರ್ವ ಮನುಷ್ಯರೊಂದಿಗೂ ಸವಾಲು ಹಾಕುತ್ತಾನೆ. ಕುರ್‌ಆನ್‌ನ ಅತಿಚಿಕ್ಕ ಅಧ್ಯಾಯವು (108ನೇ ಅಧ್ಯಾಯ) ಕೇವಲ ಹತ್ತು ಪದಗಳನ್ನು ಹೊಂದಿದ್ದರೂ ಸಹ, ಹದಿನಾಲ್ಕು ಶತಮಾನಗಳ ಹಿಂದೆ ಕುರ್‌ಆನ್ ಅವತೀರ್ಣಗೊಂಡಂದಿನಿಂದ, ಇಂದಿನ ತನಕ ಈ ಸವಾಲನ್ನು ಗೆಲ್ಲಲು ಯಾರಿಗೂ ಸಾಧ್ಯವಾಗಿಲ್ಲ.

---

1. ಅರಬಿ ಪದಗಳಾದ (ﷺ) ಎಂದರೆ, ದೇವನು ಅವರ (ಪ್ರವಾದಿಯವರ) ಹೆಸರನ್ನು ಅತ್ಯುನ್ನತಗೊಳಿಸಲಿ ಮತ್ತು ಅವರನ್ನು ನ್ಯೂನತೆಗಳಿಂದ ಸಂರಕ್ಷಿಸಲಿ ಎಂದಾಗಿದೆ.

**(3) ಪ್ರವಾದಿ ಮುಹಮ್ಮದ್(ﷺ)ರ ಆಗಮನದ ಬಗ್ಗೆ ಬೈಬಲ್‌ನಲ್ಲಿರುವ ಭವಿಷ್ಯವಾಣಿಗಳು:** ಪ್ರವಾದಿ ಮುಹಮ್ಮದ್(ﷺ)ರ ಆಗಮನದ ಬಗ್ಗೆ ಬೈಬಲ್‌ನಲ್ಲಿರುವ ಕೆಲವು ಭವಿಷ್ಯವಾಣಿಗಳ ಬಗ್ಗೆ ಈ ವಿಭಾಗದಲ್ಲಿ ಚರ್ಚಿಸಲಾಗಿದೆ.

**(4) ಈಗಾಗಲೇ ಸಂಭವಿಸಿರುವ ಕೆಲವು ಘಟನೆಗಳ ಬಗ್ಗೆ ಭವಿಷ್ಯವಾಣಿಯನ್ನು ಹೊಂದಿರುವ ಕುರ್‌ಆನ್‌ನ ಕೆಲವು ಸೂಕ್ತಿಗಳು:** ನಂತರದ ಕಾಲಘಟ್ಟಗಳಲ್ಲಿ ಸಂಭವಿಸಿದ ಕೆಲವು ಘಟನೆಗಳ ಬಗ್ಗೆ ಕುರ್‌ಆನ್ ನುಡಿದ ಭವಿಷ್ಯವಾಣಿಗಳು. ಉದಾ: ಪರ್ಶಿಯನ್ನರ ಮೇಲೆ ರೋಮನ್ನರಿಗೆ ಸಿಕ್ಕಿದ ಗೆಲುವು.

**(5) ಪ್ರವಾದಿ ಮುಹಮ್ಮದ್(ﷺ)ರು ತೋರಿಸಿದ ಪವಾಡಗಳು:** ಪ್ರವಾದಿ ಮುಹಮ್ಮದ್(ﷺ)ರು ಅನೇಕ ಪವಾಡಗಳನ್ನು ತೋರಿಸಿದ್ದರು. ಆ ಪವಾಡಗಳನ್ನು ಅನೇಕ ಜನರು ಕಣ್ಣಾರೆ ಕಂಡಿದ್ದರು.

**(6) ಮುಹಮ್ಮದ್(ﷺ)ರ ಸರಳ ಜೀವನ:** ಮುಹಮ್ಮದ್(ﷺ)ರು ಭೌತಿಕ ಲಾಭ, ಖ್ಯಾತಿ ಅಥವಾ ಅಧಿಕಾರವನ್ನು ಪಡೆಯುವುದಕ್ಕಾಗಿ ಸುಳ್ಳು ಪ್ರವಾದಿತ್ವ ವಾದಿಸಿದ ವ್ಯಕ್ತಿಯಾಗಿರಲಿಲ್ಲ ಎಂಬುದನ್ನು ಇದು ಸ್ಪಷ್ಟವಾಗಿ ಸೂಚಿಸುತ್ತದೆ.

ಈ ಆರು ವಿಧ ಪುರಾವೆಗಳಿಂದ ನಮಗೆ ತಿಳಿದು ಬರುವುದೇನೆಂದರೆ:

- ಕುರ್‌ಆನ್ ದೇವನಿಂದ ಅವತೀರ್ಣಗೊಂಡ ದೈವಿಕ ವಚನಗಳಾಗಿವೆ.
- ಮುಹಮ್ಮದ್(ﷺ)ರು ಸತ್ಯವಾಗಿಯೂ ದೇವನಿಂದ ಕಳುಹಿಸಲ್ಪಟ್ಟ ಪ್ರವಾದಿಯಾಗಿದ್ದಾರೆ.
- ಇಸ್ಲಾಮ್ ಸತ್ಯವಾಗಿಯೂ ದೈವಿಕ ಧರ್ಮವಾಗಿದೆ.

ಒಂದು ಧರ್ಮವು ಸತ್ಯವೋ, ಅಥವಾ ಸುಳ್ಳೋ ಎಂದು ಅರಿತುಕೊಳ್ಳಬೇಕಾದರೆ ನಾವು ನಮ್ಮ ಭಾವನೆ, ಯೋಚನೆ, ಅಥವಾ ಕಟ್ಟುಪಾಡುಗಳ ಮೇಲೆ ಅವಲಂಬಿತರಾಗಬಾರದು. ಬದಲಾಗಿ, ನಾವು ನಮ್ಮ ವಿವೇಕ ಮತ್ತು ಬುದ್ಧಿಯ ಮೇಲೆ ಅವಲಂಬಿತರಾಗಬೇಕು. ದೇವನು ಪ್ರವಾದಿಗಳನ್ನು ಕಳುಹಿಸಿದಾಗ, ಅವರು ನಿಜವಾಗಿಯೂ ದೇವನಿಂದ ಕಳುಹಿಸಲ್ಪಟ್ಟ ಪ್ರವಾದಿಗಳಾಗಿದ್ದಾರೆ ಮತ್ತು ಅವರು ತಂದ ಧರ್ಮವು ಸತ್ಯವಾಗಿದೆ ಎಂಬುದನ್ನು ರುಜುವಾತು ಪಡಿಸುವ ಪವಾಡಗಳು ಮತ್ತು ಪುರಾವೆಗಳ ಮೂಲಕ ಅವನು ಅವರನ್ನು ಬೆಂಬಲಿಸಿರುವನು.

ಎರಡನೆ ಅಧ್ಯಾಯವಾದ, **‘ಇಸ್ಲಾಮ್‌ನ ಕೆಲವು ಪ್ರಯೋಜನಗಳು’**, ಇಸ್ಲಾಮ್ ಮನುಷ್ಯನಿಗೆ ನೀಡುವ ಕೆಲವು ಪ್ರಯೋಜನಗಳ ಬಗ್ಗೆ ಪ್ರಸ್ತಾಪಿಸುತ್ತದೆ. ಉದಾ:

**(1) ಶಾಶ್ವತ ಸ್ವರ್ಗಕ್ಕಿರುವ ಬಾಗಿಲು**

**(2) ನರಕಾಗ್ನಿಯಿಂದ ಮುಕ್ತಿ**

**(3) ನೈಜ ಸಂತೋಷ ಮತ್ತು ಆಂತರಿಕ ಶಾಂತಿ**

**(4) ಗತ ಪಾಪಗಳಿಗೆ ಕ್ಷಮೆ**

ಮೂರನೆ ಅಧ್ಯಾಯವಾದ, **‘ಇಸ್ಲಾಮ್‌ನ ಬಗ್ಗೆ ಕೆಲವು ಮಾಹಿತಿಗಳು’**, ಇಸ್ಲಾಮಿನ ಬಗ್ಗೆ ಪ್ರಮುಖ ಮಾಹಿತಿಗಳನ್ನು ನೀಡುತ್ತದೆ, ಇಸ್ಲಾಮಿನ ಬಗ್ಗೆಯಿರುವ ಕೆಲವು ತಪ್ಪು ಕಲ್ಪನೆಗಳನ್ನು ನಿವಾರಿಸುತ್ತದೆ ಮತ್ತು ಪದೇ ಪದೇ ಕೇಳಲಾಗುವ ಪ್ರಶ್ನೆಗಳಿಗೆ ಉತ್ತರಿಸುತ್ತದೆ. ಉದಾ:

- ಭಯೋತ್ಪಾದನೆಯ ಬಗ್ಗೆ ಇಸ್ಲಾಮ್ ಏನೆನ್ನುತ್ತದೆ?
- ಇಸ್ಲಾಮಿನಲ್ಲಿ ಮಹಿಳೆಯರ ಸ್ಥಾನಮಾನವೇನು?

ಅಧ್ಯಾಯ 1

# ಇಸ್ಲಾಮ್ ಸತ್ಯವೆಂಬುದಕ್ಕೆ ಕೆಲವು ಪುರಾವೆಗಳು

ಪ್ರವಾದಿ ಮುಹಮ್ಮದ್(ﷺ)ರು ದೇವನಿಂದ ಕಳುಹಿಸಲ್ಪಟ್ಟ ಸತ್ಯ ಪ್ರವಾದಿಯಾಗಿದ್ದಾರೆ ಎಂಬುದನ್ನು ರುಜುವಾತುಪಡಿಸುವ ಅನೇಕ ಪವಾಡಗಳ ಮತ್ತು ಪುರಾವೆಗಳ ಮೂಲಕ ದೇವನು ಅವರನ್ನು ಬೆಂಬಲಿಸಿರುವನು. ಮಾತ್ರವಲ್ಲದೆ, ಕುರ್‌ಆನ್ ದೇವನಿಂದ ಅವತೀರ್ಣಗೊಂಡ ಅವನ ವಚನಗಳಾಗಿವೆ ಮತ್ತು ಅದು ಮನುಷ್ಯ ರಚಿತ ಗ್ರಂಥವಲ್ಲ ಎಂಬುದನ್ನು ಸಾಬೀತುಪಡಿಸುವ ಅನೇಕ ಪವಾಡಗಳೊಂದಿಗೆ ಅವನು ಪವಿತ್ರ ಕುರ್‌ಆನನ್ನು ಅವತೀರ್ಣಗೊಳಿಸಿರುವನು.

## (1) ಪವಿತ್ರ ಕುರ್‌ಆನ್‌ನಲ್ಲಿರುವ ವೈಜ್ಞಾನಿಕ ಪವಾಡಗಳು

ಕುರ್‌ಆನ್ ಎಂಬುದು ದೇವನು ಜಿಬ್ರೀಲ್ (Gabriel) ಎಂಬ ದೇವದೂತ(angel)ರ ಮುಖಾಂತರ ಪ್ರವಾದಿ ಮುಹಮ್ಮದ್(ﷺ)ರಿಗೆ ಅವತೀರ್ಣಗೊಳಿಸಿದ ಅವನ ವಚನಗಳಾಗಿವೆ. ಅದನ್ನು ಮುಹಮ್ಮದ್(ﷺ)ರು ಕಂಠಪಾಠ ಮಾಡಿ ತಮ್ಮ ಅನುಯಾಯಿಗಳಿಗೆ ಬೋಧಿಸಿದರು. ಅನುಯಾಯಿಗಳು ಅದನ್ನು ಕಂಠಪಾಠ ಮಾಡಿದರು, ಬರೆದಿಟ್ಟರು ಮತ್ತು ಪ್ರವಾದಿ ಮುಹಮ್ಮದ್(ﷺ)ರೊಂದಿಗೆ ಪುನರಾವಲೋಕನ ನಡೆಸಿದರು. ಪ್ರವಾದಿ ಮುಹಮ್ಮದ್(ﷺ)ರು ಪ್ರತಿವರ್ಷವೂ ಕುರ್‌ಆನನ್ನು ಜಿಬ್ರೀಲ್‌ರೊಂದಿಗೆ ಪುನರಾವಲೋಕನ ನಡೆಸುತ್ತಿದ್ದರು. ಅವರು ನಿಧನರಾದ ವರ್ಷ ಎರಡು ಬಾರಿ ಪುನರಾವಲೋಕನ ನಡೆಸಿದರು. ಕುರ್‌ಆನ್ ಅವತೀರ್ಣಗೊಂಡ ಕಾಲದಿಂದ ತೊಡಗಿ, ಇಂದಿನ ತನಕ ಅದನ್ನು ಪದಾನುಪದವಾಗಿ ಕಂಠಪಾಠ ಮಾಡಿದ ಅಸಂಖ್ಯ ಮುಸ್ಲಿಮರಿದ್ದಾರೆ. ಅವರಲ್ಲಿ ಅನೇಕರು ಹತ್ತನೇ ವಯಸ್ಸಿನಲ್ಲೇ ಕುರ್‌ಆನನ್ನು ಸಂಪೂರ್ಣ ಕಂಠಪಾಠ ಮಾಡಿದ್ದರು. ಶತಮಾನಗಳ ಬಳಿಕವೂ ಕುರ್‌ಆನಿನ ಒಂದೇ ಒಂದು ಅಕ್ಷರವೂ ಬದಲಾವಣೆಗೊಂಡಿಲ್ಲ.



ಪವಿತ್ರ ಕುರ್‌ಆನ್

ಹದಿನಾಲ್ಕು ಶತಮಾನಗಳ ಹಿಂದೆ ಕುರ್‌ಆನ್ ಪ್ರಸ್ತಾಪಿಸಿದ ಅನೇಕ ಸತ್ಯಗಳನ್ನು ವಿಜ್ಞಾನಿಗಳು ತೀರಾ ಇತ್ತೀಚೆಗಷ್ಟೇ ಸಂಶೋಧಿಸಿದ್ದಾರೆ ಮತ್ತು ಸತ್ಯವೆಂದು ದೃಢೀಕರಿಸಿದ್ದಾರೆ. ಕುರ್‌ಆನ್ ದೇವನು ಪ್ರವಾದಿ ಮುಹಮ್ಮದ್(ﷺ)ರಿಗೆ ಅವತೀರ್ಣಗೊಳಿಸಿದ ಅವನ ವಚನಗಳಾಗಿವೆಯೇ ಹೊರತು, ಪ್ರವಾದಿ ಮುಹಮ್ಮದ್(ﷺ)ರಾಗಲಿ ಅಥವಾ ಇತರ ಯಾವುದೇ ಮನುಷ್ಯರಾಗಲಿ ರಚಿಸಿದ ಗ್ರಂಥವಲ್ಲ ಎಂಬುದನ್ನು ಇದು ರುಜುವಾತುಪಡಿಸುತ್ತದೆ. ಮುಹಮ್ಮದ್(ﷺ)ರು ದೇವನಿಂದ

ಕಳುಹಿಸಲ್ಪಟ್ಟ ಸತ್ಯ ಪ್ರವಾದಿಯಾಗಿದ್ದಾರೆ ಎಂಬುದನ್ನೂ ಇದು ಸಾಬೀತುಪಡಿಸುತ್ತದೆ. ಆಧುನಿಕ ಉಪಕರಣಗಳ ಮತ್ತು ಅತ್ಯಾಧುನಿಕ ವೈಜ್ಞಾನಿಕ ವಿಧಾನಗಳ ಮೂಲಕವಲ್ಲದೆ ಕಂಡು ಹಿಡಿಯಲು ಸಾಧ್ಯವಾಗದಂತಹ ಸತ್ಯಗಳನ್ನು ಹದಿನಾಲ್ಕು ಶತಮಾನಗಳ ಹಿಂದೆ ಜೀವಿಸಿದ ಯಾರಾದರೂ ಅರಿತಿದ್ದರು ಎಂಬುದನ್ನು ಊಹಿಸಲೂ ಸಾಧ್ಯವಿಲ್ಲ. ಕೆಲವು ಉದಾಹರಣೆಗಳನ್ನು ನೋಡಿರಿ:

## ಅ) ಮಾನವ ಭ್ರೂಣ ಬೆಳವಣಿಗೆಯ ಬಗ್ಗೆ ಕುರ್‌ಆನ್:

ಮಾನವನ ಭ್ರೂಣ ಬೆಳವಣಿಗೆಯ ಬಗ್ಗೆ ದೇವನು ಕುರ್‌ಆನ್‌ನಲ್ಲಿ ಮಾತನಾಡುತ್ತಾನೆ:

> ﴾**ಖಂಡಿತವಾಗಿಯೂ ನಾವು ಮನುಷ್ಯನನ್ನು ಜೇಡಿಮಣ್ಣಿನ ಸತ್ವದಿಂದ ಸೃಷ್ಟಿಸಿದೆವು. ತರುವಾಯ ಅವನನ್ನು ಒಂದು ಬಿಂದುವನ್ನಾಗಿ ಮಾಡಿ ಭದ್ರವಾದ ಒಂದು ಸ್ಥಳದಲ್ಲಿಟ್ಟೆವು. ತರುವಾಯ ಆ ಬಿಂದುವನ್ನು ನಾವು *ಅಲಕಃ*** (ಜಿಗಣೆ, ತೂಗು ಹಾಕಲಾದ ವಸ್ತು ಮತ್ತು ಹೆಪ್ಪುಗಟ್ಟಿದ ರಕ್ತ)**ವಾಗಿ ಮಾಡಿದೆವು. ತರುವಾಯ *ಅಲಕಃ* ವನ್ನು ನಾವು *ಮುದ್ಗಃ*** (ಜಗಿಯಲಾದ ವಸ್ತು)**ವಾಗಿ ಮಾಡಿದೆವು....**﴿[1] (ಕುರ್‌ಆನ್ 23:12–14)

ಭಾಷಿಕವಾಗಿ, *ಅಲಕಃ* ಎಂಬ ಅರಬಿ ಪದಕ್ಕೆ ಮೂರು ಅರ್ಥಗಳಿವೆ: (1) ಜಿಗಣೆ, (2) ತೂಗು ಹಾಕಲಾದ ವಸ್ತು, ಮತ್ತು (3) ಹೆಪ್ಪುಗಟ್ಟಿದ ರಕ್ತ.

*ಅಲಕಃ*ದ ಹಂತದಲ್ಲಿ ಭ್ರೂಣವನ್ನು ಜಿಗಣೆಯೊಂದಿಗೆ ಹೋಲಿಸಿದರೆ ಎರಡರಲ್ಲೂ[2] ಹೋಲಿಕೆಯನ್ನು ಕಾಣಲು ಸಾಧ್ಯವಿದೆ. (ನೋಡಿ: ಚಿತ್ರ 1). ಮಾತ್ರವಲ್ಲದೆ, ಈ ಹಂತದಲ್ಲಿ ಭ್ರೂಣಕ್ಕೆ ಪೋಷಣೆ ದೊರಕುವುದು ತಾಯಿಯ ರಕ್ತದಿಂದಾಗಿದೆ. ಇದು ಕೂಡ ಜಿಗಣೆಯಂತೆಯೇ ಆಗಿದೆ, ಯಾಕೆಂದರೆ ಜಿಗಣೆಯು ಅನ್ಯರ ರಕ್ತದಿಂದ ಪೋಷಣೆ ಪಡೆಯುತ್ತದೆ.[3]

*ಅಲಕಃ* ಎಂಬ ಪದದ ಎರಡನೆ ಅರ್ಥವು 'ತೂಗುಹಾಕಲಾದ ವಸ್ತು' ಎಂದಾಗಿದೆ. ಚಿತ್ರ 2 ಮತ್ತು 3ರಲ್ಲಿರುವಂತೆ, *ಅಲಕಃ*ದ ಹಂತದಲ್ಲಿ ಭ್ರೂಣವು ತಾಯಿಯ ಗರ್ಭಾಶಯಕ್ಕೆ ತೂಗಿಕೊಂಡಿರುತ್ತದೆ.

---

1. ಈ ವಿಶೇಷ ಆವರಣಗಳ ﴾....﴿ ಮಧ್ಯೆಯಿರುವುದು ಕುರ್‌ಆನ್ ವಚನಗಳ ಕನ್ನಡ ಅರ್ಥಾನುವಾದವಾಗಿದೆಯೇ ಹೊರತು ಕುರ್‌ಆನ್ ಅಲ್ಲ. ಕುರ್‌ಆನ್ ಎಂಬುದು ಅರಬಿ ಭಾಷೆಯಲ್ಲಿರುವುದಾಗಿದೆ.
2. *The Developing Human*, Moore and Persaud, 5th ed., p. 8.
3. *Human Development as Described in the Qur'an and Sunnah*, Moore and others, p. 36.




**ಚಿತ್ರ 1**. *ಅಲಕಃದ ಹಂತದಲ್ಲಿ ಜಿಗಣೆ ಮತ್ತು ಮನುಷ್ಯ ಭ್ರೂಣಗಳ ಮಧ್ಯೆ ಇರುವ ಹೋಲಿಕೆಯನ್ನು ಸೂಚಿಸುವ ರೇಖಾಚಿತ್ರಗಳು.* [Leech drawing from *Human Development as Described in the Qur'an and Sunnah,* Moore and others, p. 37, modified from *Integrated Principles of Zoology*, Hickman and others. Embryo drawing from *The Developing Human*, Moore and Persaud, 5th ed., p. 73.]




**ಚಿತ್ರ 2**. *ಅಲಕಃದ ಹಂತದಲ್ಲಿ ಭ್ರೂಣವು ತಾಯಿಯ ಗರ್ಭಾಶಯಕ್ಕೆ ತೂಗಿಕೊಂಡಿರುವುದನ್ನು ಈ ರೇಖಾಚಿತ್ರದಲ್ಲಿ ಕಾಣಬಹುದು.* [*The Developing Human*, Moore and Persaud, 5th ed., p. 66.]




**ಚಿತ್ರ 3**. *ಅಲಕಃದ ಹಂತದಲ್ಲಿ (ಭ್ರೂಣಕ್ಕೆ ಸುಮಾರು 15 ದಿನಗಳಾಗುವಾಗ) ಭ್ರೂಣವು (B) ತಾಯಿಯ ಗರ್ಭಾಶಯಕ್ಕೆ ತೂಗಿಕೊಂಡಿರುವುದನ್ನು ಸೂಕ್ಷ್ಮದರ್ಶಕದಿಂದ ತೆಗೆದ ಈ ಚಿತ್ರದಲ್ಲಿ ಕಾಣಬಹುದಾಗಿದೆ. ಈ ಹಂತದಲ್ಲಿ ಭ್ರೂಣದ ಗಾತ್ರವು 0.6 ಮಿ.ಮೀ. ಮಾತ್ರವಾಗಿದೆ.* [*The Developing Human*, Moore, 3rd ed., p. 66, from *Histology*, Leeson and Leeson.]

*ಅಲಕಃ* ಎಂಬ ಪದದ ಮೂರನೆ ಅರ್ಥವು 'ಹೆಪ್ಪುಗಟ್ಟಿದ ರಕ್ತ' ಎಂದಾಗಿದೆ. *ಅಲಕಃ*ದ ಹಂತದಲ್ಲಿ ಭ್ರೂಣ ಮತ್ತು ಅದರ ಚೀಲಗಳ ಬಾಹ್ಯ ರೂಪವು ಹೆಪ್ಪುಗಟ್ಟಿದ ರಕ್ತವನ್ನು ಹೋಲುತ್ತದೆ. ಈ ಹಂತದಲ್ಲಿ ಹೇರಳ ಪ್ರಮಾಣದಲ್ಲಿರುವ ರಕ್ತವು ಭ್ರೂಣದಲ್ಲಿ ಕಂಡುಬರುವುದೇ ಇದಕ್ಕಿರುವ ಕಾರಣವಾಗಿದೆ.[1] (ನೋಡಿ: ಚಿತ್ರ 4). ಮಾತ್ರವಲ್ಲದೆ, ಈ ಹಂತದಲ್ಲಿ ಭ್ರೂಣದಲ್ಲಿರುವ ರಕ್ತವು ಮೂರನೇ ವಾರದ ಅಂತ್ಯದ ತನಕ ಪರಿಚಲನೆಗೊಳ್ಳುವುದಿಲ್ಲ.[2] ಆದ್ದರಿಂದ ಈ ಹಂತದಲ್ಲಿ ಭ್ರೂಣವು ಹೆಪ್ಪುಗಟ್ಟಿದ ರಕ್ತದಂತಿರುತ್ತದೆ.




**ಚಿತ್ರ 4.** *ಅಲಕಃ*ದ ಹಂತದಲ್ಲಿ ಭ್ರೂಣದಲ್ಲಿರುವ ಪ್ರಾಥಮಿಕ ಹೃದಯ ರಕ್ತನಾಳದ ವ್ಯವಸ್ಥೆ. ಭ್ರೂಣ ಮತ್ತು ಅದರ ಚೀಲಗಳ ಬಾಹ್ಯ ರೂಪವು ಹೆಪ್ಪುಗಟ್ಟಿದ ರಕ್ತವನ್ನು ಹೋಲುತ್ತದೆ. ಈ ಹಂತದಲ್ಲಿ ಹೇರಳ ಪ್ರಮಾಣದಲ್ಲಿರುವ ರಕ್ತವು ಭ್ರೂಣದಲ್ಲಿ ಕಂಡುಬರುವುದೇ ಇದಕ್ಕಿರುವ ಕಾರಣವಾಗಿದೆ. [*The Developing Human*, Moore, 5th ed., p. 65.]



ಒಟ್ಟಿನಲ್ಲಿ *ಅಲಕಃ* ಎಂಬ ಪದಕ್ಕಿರುವ ಮೂರು ಅರ್ಥಗಳೂ, *ಅಲಕಃ*ದ ಹಂತದಲ್ಲಿರುವ ಭ್ರೂಣದೊಂದಿಗೆ ಕರಾರುವಾಕ್ಕಾಗಿ ತಾಳೆಯಾಗುತ್ತದೆ.

ಕುರ್‌ಆನ್‌ನಲ್ಲಿ ಪ್ರಸ್ತಾಪಿಸಲಾದ ಮುಂದಿನ ಹಂತವು *ಮುದ್ಗಃ* ಎಂಬ ಹಂತವಾಗಿದೆ. *ಮುದ್ಗಃ* ಎಂಬ ಅರಬಿ ಪದದ ಅರ್ಥವು 'ಜಗಿಯಲಾದ ವಸ್ತು' ಎಂದಾಗಿದೆ. ನಾವು ಒಂದು ತುಂಡು ಅಂಟನ್ನು ಬಾಯಲ್ಲಿಟ್ಟು ಜಗಿದು, ತರುವಾಯ *ಮುದ್ಗಃ*ದ ಹಂತದಲ್ಲಿರುವ ಭ್ರೂಣದೊಂದಿಗೆ ಅದನ್ನು ಹೋಲಿಸಿದರೆ, *ಮುದ್ಗಃ*ದ ಹಂತದಲ್ಲಿರುವ ಭ್ರೂಣವು ಆ ಜಗಿದ ವಸ್ತುವಿನೊಂದಿಗೆ ಹೋಲಿಕೆಯಾಗುವುದನ್ನು ಕಾಣಬಹುದಾಗಿದೆ. ಭ್ರೂಣದ ಬೆನ್ನಿನ ಭಾಗದಲ್ಲಿರುವ ಕಾಯಖಂಡಗಳು (somites) ಜಗಿಯಲಾದ ವಸ್ತುವಿನಲ್ಲಿ ಮೂಡುವ ಹಲ್ಲಿನ ಗುರುತುಗಳನ್ನು ಹೋಲುವುದೇ ಇದಕ್ಕೆ ಕಾರಣವಾಗಿದೆ.[3] (ನೋಡಿ ಚಿತ್ರ 5 ಮತ್ತು 6).

ವಿಜ್ಞಾನಿಗಳು ಅತ್ಯಾಧುನಿಕ ಉಪಕರಣ ಮತ್ತು ಶಕ್ತಿಶಾಲಿ ಸೂಕ್ಷ್ಮದರ್ಶಕಗಳ ಸಹಾಯದಿಂದ ತೀರಾ ಇತ್ತೀಚೆಗೆ ಸಂಶೋಧಿಸಿದ ಇವುಗಳನ್ನು ಹದಿನಾಲ್ಕು ಶತಮಾನಗಳ ಹಿಂದೆಯೇ ಮುಹಮ್ಮದ್(ﷺ)ರು ಅರಿತಿರಲು ಹೇಗೆ ಸಾಧ್ಯ? ಹ್ಯಾಮ್ ಮತ್ತು ಲ್ಯೂವನ್‌ಹೋಕ್ ಎಂಬ ವಿಜ್ಞಾನಿಗಳು 1677ರಲ್ಲಿ (ಮುಹಮ್ಮದ್(ﷺ)ರ ಕಾಲಾನಂತರ ಸುಮಾರು 1000 ವರ್ಷಗಳ ಬಳಿಕ) ಸುಧಾರಿತ ಸೂಕ್ಷ್ಮದರ್ಶಕದ ನೆರವಿನಿಂದ ಮನುಷ್ಯ

1. *Human Development as Described in the Qur'an and Sunnah*, Moore and others, pp. 37-38.
2. *The Developing Human*, Moore and Persaud, 5th ed., p. 65.
3. *The Developing Human*, Moore and Persaud, 5th ed., p. 8.



**ಚಿತ್ರ 5**. ಮುದ್ಗ‌ಃದ ಹಂತದಲ್ಲಿರುವ 28 ದಿನಗಳ ಭ್ರೂಣ. ಈ ಹಂತದಲ್ಲಿ ಭ್ರೂಣವು ಜಗಿಯಲಾದ ವಸ್ತುವಿನ ರೂಪವನ್ನು ಹೊಂದಿರುತ್ತದೆ. ಭ್ರೂಣದ ಬೆನ್ನಿನ ಭಾಗದಲ್ಲಿರುವ ಕಾಯಖಂಡಗಳು ಜಗಿಯಲಾದ ವಸ್ತುವಿನಲ್ಲಿ ಮೂಡುವ ಹಲ್ಲಿನ ಗುರುತುಗಳನ್ನು ಹೋಲುವುದೇ ಇದಕ್ಕೆ ಕಾರಣವಾಗಿದೆ. ಭ್ರೂಣದ ನಿಜ ಗಾತ್ರವು 4 ಮಿ.ಮೀ. ಆಗಿದೆ. [*The Developing Human*, Moore and Persaud, 5th ed., p. 82, from Professor Hideo Nishimura, Kyoto University, Kyoto, Japan.]




**ಚಿತ್ರ 6**. ಮುದ್ಗ‌ಃದ ಹಂತದಲ್ಲಿರುವ ಭ್ರೂಣದ ರೂಪವನ್ನು ಜಗಿಯಲಾದ ಒಂದು ತುಂಡು ಅಂಟಿನೊಂದಿಗೆ ಹೋಲಿಸಿದರೆ ಅವೆರಡರ ಮಧ್ಯೆಯೂ ಸಾಮ್ಯತೆಯನ್ನು ಕಾಣಬಹುದಾಗಿದೆ.

**A**. ಮುದ್ಗ‌ಃದ ಹಂತದಲ್ಲಿರುವ ಭ್ರೂಣದ ರೇಖಾಚಿತ್ರ. ಭ್ರೂಣದ ಬೆನ್ನಿನ ಭಾಗದಲ್ಲಿರುವ ಕಾಯಖಂಡಗಳು ಹಲ್ಲಿನ ಗುರುತನ್ನು ಹೊಂದಿರುವುದನ್ನು ಕಾಣಬಹುದು. [*The Developing Human*, Moore and Persaud, 5th ed., p. 79.]

**B**. ಜಗಿಯಲಾದ ಒಂದು ತುಂಡು ಅಂಟಿನ ಚಿತ್ರ

ಕುರ್‌ಆನ್ ಸತ್ಯವೆಂಬುದಕ್ಕೆ ಕೆಲವು ಪುರಾವೆಗಳು

ವೀರ್ಯಕೋಶಗಳನ್ನು (spermatozoa) ಮೊಟ್ಟಮೊದಲನೆಯದಾಗಿ ನೋಡಿದರು. ವೀರ್ಯಕೋಶದಲ್ಲಿ ಅತಿಸೂಕ್ಷ್ಮವಾದ ಮನುಷ್ಯ ರೂಪವಿದ್ದು ಅದನ್ನು ಹೆಣ್ಣಿನ ಜನನಾಂಗದಲ್ಲಿ ನಿಕ್ಷೇಪಿಸಿದಾಗ ಅದು ಶಿಶುವಾಗಿ ಬೆಳೆಯುತ್ತದೆಂದು ಅವರು ತಪ್ಪಾಗಿ ತಿಳಿದುಕೊಂಡಿದ್ದರು.[1]

ವಿಶ್ರಾಂತ ಪ್ರೊಫೆಸ್ಸರ್ ಕೀತ್ ಎಲ್. ಮೂರ್ ಎಂಬವರು ಅಂಗರಚನಾಶಾಸ್ತ್ರ ಮತ್ತು ಭ್ರೂಣಶಾಸ್ತ್ರ ಕ್ಷೇತ್ರದಲ್ಲಿ ಜಗತ್ತಿನ ಪ್ರಮುಖ ವಿಜ್ಞಾನಿಗಳ ಪೈಕಿ ಒಬ್ಬರಾಗಿದ್ದಾರೆ. ಇವರು ಬರೆದ 'ದಿ ಡೆವಲಪಿಂಗ್ ಹ್ಯೂಮನ್' ಎಂಬ ಗ್ರಂಥವು ಎಂಟು ಭಾಷೆಗಳಿಗೆ ಭಾಷಾಂತರಗೊಂಡಿದೆ. ಈ ಗ್ರಂಥವು ವೈಜ್ಞಾನಿಕ ಪರಾಮರ್ಶನಾ ಗ್ರಂಥವಾಗಿರುವುದು ಮಾತ್ರವಲ್ಲದೆ, ಒಬ್ಬನೇ ಲೇಖಕನಿಂದ ಬರೆಯಲಾದ ಅತ್ಯುತ್ತಮ ಪುಸ್ತಕವೆಂದು ಅಮೇರಿಕಾದ ವಿಶೇಷ ಸಮಿತಿಯೊಂದು ಆರಿಸಿದ ಗ್ರಂಥವೂ ಆಗಿದೆ. ಡಾ। ಕೀತ್ ಮೂರ್‌ರವರು ಕೆನಡಾದ ಟೊರೊಂಟೋದಲ್ಲಿರುವ ಟೊರೊಂಟೋ ವಿಶ್ವವಿದ್ಯಾಲಯದಲ್ಲಿ ಅಂಗರಚನಾಶಾಸ್ತ್ರ ಮತ್ತು ಕೋಶ ಜೀವಶಾಸ್ತ್ರದ ವಿಶ್ರಾಂತ ಪ್ರಾಧ್ಯಾಪಕರಾಗಿದ್ದಾರೆ. ಅಲ್ಲಿ ಅವರು ಫಾಕ್ಯುಲ್ಟಿ ಆಫ್ ಮೆಡಿಸಿನ್‌ನಲ್ಲಿ ಬೇಸಿಕ್ ಸಯನ್ಸ್‌ನ ಸಹಾಯಕ ಡೀನ್ ಆಗಿದ್ದರು. ಕೆನಡಾದಲ್ಲಿ ಅಂಗರಚನಾಶಾಸ್ತ್ರ ಕ್ಷೇತ್ರದಲ್ಲಿ ಸೇವೆ ಸಲ್ಲಿಸಿದವರಿಗೆ ನೀಡಲಾಗುವ ಅತಿ ಪ್ರತಿಷ್ಠಿತ ಜೆ. ಸಿ. ಬಿ. ಗ್ರಾಂಟ್ ಅವಾರ್ಡನ್ನು ಕೆನಡಿಯನ್ ಅಸೋಸಿಯೇಶನ್ ಆಫ್ ಅನಾಟಮಿಸ್ಟ್ಸ್ ಸಂಸ್ಥೆಯಿಂದ ಅವರು 1984ರಲ್ಲಿ ಪಡೆದರು. ಕೆನಡಿಯನ್ & ಅಮೇರಿಕನ್ ಅಸೋಸಿಯೇಶನ್ ಆಫ್ ಅನಾಟಮಿಸ್ಟ್ಸ್, ಕೌನ್ಸಿಲ್ ಆಫ್ ದಿ ಯೂನಿಯನ್ ಆಫ್ ಬಯಾಲಜಿಕಲ್ ಸಯನ್ಸಸ್ ಮೊದಲಾದ ಅನೇಕ ಅಂತರಾಷ್ಟ್ರೀಯ ಸಂಸ್ಥೆಗಳಿಗೆ ಅವರು ನಿರ್ದೇಶಕರಾಗಿ ದುಡಿದಿದ್ದಾರೆ.

1981ರಲ್ಲಿ, ಸೌದಿ ಅರೇಬಿಯಾದ ದಮ್ಮಾಮ್‌ನಲ್ಲಿ ಜರುಗಿದ ಏಳನೇ ವೈದ್ಯಕೀಯ ಸಮ್ಮೇಳನದಲ್ಲಿ ಪ್ರೊ। ಮೂರ್ ಹೀಗೆಂದರು: "ಮಾನವ ಬೆಳವಣಿಗೆಯ ಬಗ್ಗೆ ಕುರ್‌ಆನ್‌ನಲ್ಲಿರುವ ಉಕ್ತಿಗಳನ್ನು ವಿಶದೀಕರಿಸುವಲ್ಲಿ ಸಹಾಯ ಮಾಡಲು ನನಗೆ ಅತ್ಯಂತ ಸಂತಸವಾಗುತ್ತಿದೆ. ಈ ಉಕ್ತಿಗಳು ಮುಹಮ್ಮದ್‌ರಿಗೆ ದೇವನಿಂದಲೇ ಬಂದಿರಲು ಸಾಧ್ಯ ಎಂಬುದು ನನಗೆ ಅತ್ಯಂತ ಸ್ಪಷ್ಟವಾಗಿದೆ. ಯಾಕೆಂದರೆ ಬಹುತೇಕ ಈ ಎಲ್ಲ ಜ್ಞಾನಗಳನ್ನೂ ತದನಂತರದ ಅನೇಕ ಶತಮಾನಗಳ ತನಕವೂ ಸಂಶೋಧಿಸಲಾಗಿರಲಿಲ್ಲ. ಮುಹಮ್ಮದ್ ದೇವನ ಸಂದೇಶವಾಹಕರಾಗಿದ್ದಾರೆ ಎಂಬುದನ್ನು ಇದು ನನಗೆ ರುಜುವಾತುಪಡಿಸಿಕೊಡುತ್ತದೆ."[2]

ತರುವಾಯ ಪ್ರೊ। ಮೂರ್‌ರೊಂದಿಗೆ ಈ ಪ್ರಶ್ನೆಯನ್ನು ಕೇಳಲಾಯಿತು: "ಕುರ್‌ಆನ್ ದೈವಿಕ ವಚನಗಳಾಗಿವೆಯೆಂದು ನೀವು ನಂಬುತ್ತೀರಿ ಎಂದಾಗಿದೆಯೇ ನಿಮ್ಮ ಈ ಹೇಳಿಕೆಯ ಅರ್ಥ?" ಅವರು ಉತ್ತರಿಸಿದರು: "ಅದನ್ನು ಅಂಗೀಕರಿಸಲು ನನಗೆ ಯಾವುದೇ ಪ್ರಯಾಸವಿಲ್ಲ."[3]

ಬೇರೊಂದು ಸಮ್ಮೇಳನದಲ್ಲಿ ಪ್ರೊ। ಮೂರ್ ಹೇಳಿದರು: "ಬೆಳವಣಿಗೆಯ ಹಂತದಲ್ಲಿ ಪದೇ ಪದೇ ಬದಲಾವಣೆಗಳಿಗೆ ಒಳಗಾಗುವ ಕಾರಣ ಮಾನವ ಭ್ರೂಣಗಳ ಹಂತೀಕರಣವು (staging) ಸಂಕೀರ್ಣವಾಗಿರುವುದರಿಂದ, ಕುರ್‌ಆನ್ ಮತ್ತು ಸುನ್ನಃ (ಪ್ರವಾದಿಚರ್ಯೆ)ದಲ್ಲಿ

1. *The Developing Human*, Moore and Persaud, 5th ed., p. 9.
2. ಈ ಅಭಿಪ್ರಾಯದ ಮೂಲವು ದಿಸ್ ಈಸ್ ದ ಟ್ರೂತ್ ಎಂಬ ವೀಡಿಯೋ ಟೇಪ್‌ನಲ್ಲಿದೆ. ಇದನ್ನು ಮತ್ತು ಪ್ರೊ। ಮೂರ್‌ರವರ ಇತರ ಅಭಿಪ್ರಾಯಗಳನ್ನು ನೋಡಲು *http://www.islam-guide.com/truth.htm* ಎಂಬ ವೆಬ್‌ಸೈಟನ್ನು ಸಂದರ್ಶಿಸಿರಿ.
3. ದಿಸ್ ಈಸ್ ದ ಟ್ರೂತ್ ಎಂಬ ವೀಡಿಯೋ ಟೇಪ್.

ಪ್ರಸ್ತಾಪಿಸಲಾದ ಪಾರಿಭಾಷಿಕ ಪದಗಳನ್ನು ಬಳಸಿ ವರ್ಗೀಕರಣದ ಹೊಸ ವ್ಯವಸ್ಥೆಯೊಂದನ್ನು ಅಭಿವೃದ್ಧಿಪಡಿಸುವ ವಿಚಾರವನ್ನು ಮಂಡಿಸಲಾಗುತ್ತಿದೆ. ಈ ವ್ಯವಸ್ಥೆಯು ಸರಳವೂ, ಗ್ರಾಹ್ಯವೂ, ಪ್ರಸಕ್ತ ಭ್ರೂಣಶಾಸ್ತ್ರೀಯ ಜ್ಞಾನದೊಂದಿಗೆ ಸರಿಯಾಗಿ ಹೊಂದಿಕೊಳ್ಳುವಂತದ್ದೂ ಆಗಿದೆ. ನಾಲ್ಕು ವರ್ಷಗಳ ಕಾಲ ನಡೆಸಿದ ಕುರ್‌ಆನ್ ಮತ್ತು ಹದೀಸ್‌ಗಳ ಆಳ ಅಧ್ಯಯನವು ಮಾನವ ಭ್ರೂಣಗಳನ್ನು ವರ್ಗೀಕರಿಸುವ ವ್ಯವಸ್ಥೆಯೊಂದನ್ನು ತೋರಿಸಿಕೊಟ್ಟಿದೆ. ಇದು ನಿಜಕ್ಕೂ ಅದ್ಭುತವಾಗಿದೆ, ಯಾಕೆಂದರೆ ಈ ವ್ಯವಸ್ಥೆಯು ದಾಖಲಿಸಲ್ಪಟ್ಟಿದ್ದು 7ನೇ ಶತಮಾನದಲ್ಲಾಗಿತ್ತು. ಭ್ರೂಣಶಾಸ್ತ್ರದ ಜನಕನಾದ ಅರಿಸ್ಟಾಟಲ್ ಕ್ರಿ.ಪೂ. 4ನೇ ಶತಮಾನದಲ್ಲಿ ಕೋಳಿ ಮೊಟ್ಟೆಗಳ ಮೇಲೆ ನಡೆಸಿದ ಅಧ್ಯಯನದಿಂದ ಕೋಳಿ ಮರಿಗಳ ಭ್ರೂಣವು ಹಂತ ಹಂತವಾಗಿ ಬೆಳೆಯುತ್ತದೆ ಎಂಬುದನ್ನು ಅರಿತುಕೊಂಡಿದ್ದರೂ ಸಹ, ಈ ಹಂತಗಳ ಬಗ್ಗೆ ಯಾವುದೇ ಮಾಹಿತಿಯನ್ನು ಒದಗಿಸಲು ಆತನಿಗೆ ಸಾಧ್ಯವಾಗಿರಲಿಲ್ಲ. ಭ್ರೂಣಶಾಸ್ತ್ರದ ಇತಿಹಾಸದ ಬಗ್ಗೆ ನಮಗೆ ಗೊತ್ತಿರುವ ಪ್ರಕಾರ 20ನೇ ಶತಮಾನದ ತನಕ ಮಾನವ ಭ್ರೂಣಗಳ ಹಂತೀಕರಣ ಮತ್ತು ವರ್ಗೀಕರಣಗಳ ಬಗ್ಗೆ ಅತ್ಯಲ್ಪವನ್ನು ಮಾತ್ರ ನಾವು ತಿಳಿದಿದ್ದೆವು. ಈ ಕಾರಣದಿಂದಾಗಿ, ಮನುಷ್ಯ ಭ್ರೂಣದ ಬಗ್ಗೆ ಕುರ್‌ಆನ್‌ನಲ್ಲಿರುವ ವಿವರಣೆಗಳು ಏಳನೇ ಶತಮಾನದ ವೈಜ್ಞಾನಿಕ ಜ್ಞಾನದ ಆಧಾರದಲ್ಲಾಗಿರಲು ಸಾಧ್ಯವೇ ಇಲ್ಲ. ಇದಕ್ಕಿರುವ ಒಂದೇ ಒಂದು ವೈಚಾರಿಕ ಉತ್ತರವೇನೆಂದರೆ: ಈ ವಿವರಣೆಗಳು ಮುಹಮ್ಮದ್‌ರಿಗೆ ಅವತೀರ್ಣಗೊಂಡಿರುವುದು ದೇವನಿಂದಾಗಿದೆ. ಮುಹಮ್ಮದ್ ಒಬ್ಬ ಅನಕ್ಷರಸ್ಥ ವ್ಯಕ್ತಿಯಾಗಿರುವುದರಿಂದ ಮತ್ತು ವೈಜ್ಞಾನಿಕವಾದ ಯಾವುದೇ ತರಬೇತಿಯೂ ಅವರಿಗೆ ಸಿಕ್ಕಿಲ್ಲವಾದ್ದರಿಂದ ಅವರು ಈ ವಿವರಣೆಗಳನ್ನು ಸ್ವತಃ ಅರಿತುಕೊಂಡರು ಎಂದು ಹೇಳುವುದು ಸಾಧ್ಯವಿಲ್ಲ.”[1]

## ಆ) ಪರ್ವತಗಳ ಬಗ್ಗೆ ಕುರ್‌ಆನ್

‘ಅರ್ತ್’ ಎಂಬ ಹೆಸರಿನ ಒಂದು ಗ್ರಂಥವು ಜಗತ್ತಿನಾದ್ಯಂತ ಅನೇಕ ವಿಶ್ವವಿದ್ಯಾಲಯಗಳಲ್ಲಿ ಮೂಲ ಪರಾಮರ್ಶನಾ ಪಠ್ಯಪುಸ್ತಕವಾಗಿದೆ. ಅದರ ಇಬ್ಬರು ಗ್ರಂಥಕರ್ತರ ಪೈಕಿ ಒಬ್ಬರು ನಿವೃತ್ತ ಪ್ರೊಫೆಸರ್ ಫ್ರಾಂಕ್ ಪ್ರೆಸ್ ಎಂಬವರಾಗಿದ್ದಾರೆ. ಅವರು ಅಮೇರಿಕಾದ ಮಾಜಿ ಅಧ್ಯಕ್ಷ ಜಿಮ್ಮಿ ಕಾರ್ಟರ್‌ರ ವೈಜ್ಞಾನಿಕ ಸಲಹೆಗಾರರಾಗಿದ್ದರು. ಅವರು 12 ವರ್ಷಗಳ ಕಾಲ ವಾಶಿಂಗ್ಟನ್‌ನ ನ್ಯಾಶನಲ್ ಅಕಾಡೆಮಿ ಆಫ್ ಸಯನ್ಸ್ ಎಂಬ ಸಂಸ್ಥೆಯ ಅಧ್ಯಕ್ಷರಾಗಿದ್ದರು. ಪರ್ವತಗಳು ಅಡಿಬೇರುಗಳನ್ನು ಹೊಂದಿವೆಯೆಂದು ಅವರ ಗ್ರಂಥವು ಹೇಳುತ್ತದೆ.[2] ಈ ಬೇರುಗಳು ಭೂಮಿಯೊಳಗೆ ಆಳವಾಗಿ ನಾಟಲ್ಪಟ್ಟಿರುವುದರಿಂದ ಪರ್ವತಗಳು ಗೂಟದ ಆಕಾರವನ್ನು ಹೊಂದಿವೆ. (ನೋಡಿ: ಚಿತ್ರ 7, 8 ಮತ್ತು 9)

ಇದು ಕುರ್‌ಆನ್ ಪರ್ವತಗಳನ್ನು ವಿವರಿಸುವ ರೀತಿ. ದೇವನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

> ﴾**ನಾವು ಭೂಮಿಯನ್ನು ಒಂದು ಹಾಸನ್ನಾಗಿಯೂ, ಪರ್ವತಗಳನ್ನು ಗೂಟಗಳನ್ನಾಗಿಯೂ ಮಾಡಿಲ್ಲವೇ?**﴿ (ಕುರ್‌ಆನ್ 78:6–7)

---

1. ದಿಸ್ ಈಸ್ ದ ಟ್ರೂತ್ ಎಂಬ ವೀಡಿಯೋ ಟೇಪ್. ಪುಟ 10ರಲ್ಲಿರುವ ಟಿಪ್ಪಣಿ ಸಂಖ್ಯೆ 2ನ್ನು ನೋಡಿರಿ.
2. *Earth*, Press and Siever, p. 435. Also see *Earth Science*, Tarbuck and Lutgens, p. 157.




**ಚಿತ್ರ 7.** ಭೂಮಿಯ ಮೇಲ್ಮೈಯ ಅಡಿಯಲ್ಲಿ ಪರ್ವತಗಳು ಆಳವಾದ ಬೇರುಗಳನ್ನು ಹೊಂದಿವೆ. [*Earth*, Press and Siever, p. 413.]






**ಚಿತ್ರ 8.** ಪರ್ವತಗಳು ಗೂಟಗಳಂತೆ ಭೂಮಿಯಡಿಯಲ್ಲಿ ಆಳವಾದ ಬೇರುಗಳನ್ನು ಹೊಂದಿವೆ. [*Anatomy of the Earth*, Cailleux, p. 220.]




**ಚಿತ್ರ 9.** ಆಳ ಬೇರುಗಳನ್ನು ಹೊಂದಿರುವುದರಿಂದಾಗಿ ಪರ್ವತಗಳು ಹೇಗೆ ಆಕಾರದಲ್ಲಿ ಗೂಟಗಳಂತಿವೆ ಎಂಬುದನ್ನು ತೋರಿಸುವ ಇನ್ನೊಂದು ಚಿತ್ರ. [*Earth Science*, Tarbuck and Lutgens, p. 158.]

ಪರ್ವತಗಳು ಭೂಮಿಯ ಮೇಲ್ಮೈಯ ಅಡಿಭಾಗದಲ್ಲಿ ಆಳ ಬೇರುಗಳನ್ನು ಹೊಂದಿವೆಯೆಂದು ಆಧುನಿಕ ಭೂವಿಜ್ಞಾನಗಳು ಸಾಬೀತುಪಡಿಸಿವೆ. ಈ ಬೇರುಗಳು ಮೇಲ್ಮೈಯಲ್ಲಿರುವ

ಪರ್ವತಗಳ ಎತ್ತರಕ್ಕಿಂತಲೂ ಹಲವು ಪಟ್ಟು ಹೆಚ್ಚು ಆಳವಾಗಿ ನಾಟಲ್ಪಟ್ಟಿರುತ್ತವೆ.[1] ಆದ್ದರಿಂದ ಈ ಮಾಹಿತಿಯ ಆಧಾರದ ಮೇಲೆ ಪರ್ವತಗಳನ್ನು ವಿವರಿಸಬಹುದಾದ ಅತಿ ಸೂಕ್ತ ಪದವು 'ಗೂಟ' ಎಂಬುದಾಗಿದೆ. ಯಾಕೆಂದರೆ ಸರಿಯಾಗಿ ನಾಟಲಾದ ಗೂಟದ ಹೆಚ್ಚಿನ ಭಾಗವು ಭೂಮಿಯ ಮೇಲ್ಮೈಯ ಅಡಿಭಾಗದಲ್ಲಿ ಮರೆಯಾಗಿರುತ್ತದೆ.

ವಿಜ್ಞಾನದ ಇತಿಹಾಸವು ಹೇಳುವ ಪ್ರಕಾರ ಪರ್ವತಗಳಿಗೆ ಆಳ ಬೇರುಗಳಿವೆಯೆಂಬ ಸಿದ್ಧಾಂತವು ಮೊಟ್ಟಮೊದಲನೆಯದಾಗಿ ಪರಿಚಯಿಸಲಾಗಿದ್ದು 1865ರಲ್ಲಿ ಸರ್ ಜಾರ್ಜ್ ಐರಿ ಎಂಬವರಿಂದಾಗಿತ್ತು.[2]

ಭೂಮಿಯ ಮೇಲ್ಪದರವನ್ನು ಅಚಲವಾಗಿಸುವಲ್ಲಿ ಪರ್ವತಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ.[3] ಭೂಮಿ ಅಲುಗಾಡುವುದನ್ನು ಅವು ತಡೆಯುತ್ತವೆ. ದೇವನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

﴿**ಭೂಮಿಯು ನಿಮ್ಮೊಂದಿಗೆ ಅಲುಗಾಡದಿರಲು ಅದರಲ್ಲಿ ನಾಟಿ ನಿಲ್ಲುವ ಪರ್ವತಗಳನ್ನು ಅವನು ಸ್ಥಾಪಿಸಿರುವನು.**﴾ (ಕುರ್‌ಆನ್ 16:15)

ಹಾಗೆಯೇ, ಪರ್ವತಗಳು ಭೂಮಿಯನ್ನು ಅಚಲವಾಗಿಡುತ್ತದೆಂಬುದನ್ನು ಆಧುನಿಕ ಭೂಪದರ ರಚನಾ ಸಿದ್ಧಾಂತವು (theory of plate tectonics) ಕೂಡ ಒಪ್ಪಿಕೊಳ್ಳುತ್ತದೆ. ಭೂಮಿಯನ್ನು ಅಚಲವಾಗಿಡುವಲ್ಲಿ ಪರ್ವತಗಳ ಪಾತ್ರದ ಬಗ್ಗೆಯಿರುವ ಅರಿವು 1960ರ ನಂತರವಷ್ಟೇ ಭೂಪದರ ರಚನಾ ಶಾಸ್ತ್ರದ ಚೌಕಟ್ಟಿನಲ್ಲಿ ಅರಿತುಕೊಳ್ಳಲು ಆರಂಭಿಸಲಾಗಿತ್ತು.[4]

ಪ್ರವಾದಿ ಮುಹಮ್ಮದ್(ﷺ)ರವರ ಕಾಲದಲ್ಲಿ ಯಾರಾದರೂ ಪರ್ವತಗಳ ನಿಜ ಆಕಾರವನ್ನು ಅರಿತಿದ್ದರೇ? ವಿಜ್ಞಾನಿಗಳು ದೃಢೀಕರಿಸಿದಂತೆ, ತನ್ನ ಮುಂದೆ ಕಾಣುತ್ತಿರುವ ಪರ್ವತವು ವಾಸ್ತವಿಕವಾಗಿ ಭೂಮಿಯ ಆಳದಿಂದ ಉದ್ಭವಿಸುವ ಬೇರನ್ನು ಹೊಂದಿದೆಯೆಂದು ಯಾರಾದರೂ ತಿಳಿದಿದ್ದರೇ? ಕುರ್‌ಆನ್ ಸೂಕ್ತಿಗಳಲ್ಲಿರುವ ಸತ್ಯವನ್ನು ಆಧುನಿಕ ಭೂವಿಜ್ಞಾನವು ದೃಢೀಕರಿಸಿದೆ.



1. *The Geological Concept of Mountains in the Qur'an*, El-Naggar, p. 5.
2. *Earth*, Press and Siever, p. 435. Also see *The Geological Concept of Mountains in the Qur'an*, p. 5.
3. *The Geological Concept of Mountains in the Qur'an*, pp. 44-45.
4. *The Geological Concept of Mountains in the Qur'an*, p. 5.

## ಇ) ಪ್ರಪಂಚದ ಉಗಮದ ಬಗ್ಗೆ ಕುರ್‌ಆನ್

ಕಾಲದ ಒಂದು ಹಂತದಲ್ಲಿ ಸಂಪೂರ್ಣ ಪ್ರಪಂಚವು 'ಹೊಗೆ'ಯ (ಅಂದರೆ ಒಂದು ಅಪಾರದರ್ಶಕ, ಅತಿ ದಟ್ಟವಾದ ಮತ್ತು ಬಿಸಿ ಅನಿಲ ಸಂಯೋಜನೆಯ) ಒಂದು ಮೋಡವಾಗಿತ್ತೆಂದು ವೀಕ್ಷಣ ಮತ್ತು ಸೈದ್ಧಾಂತಿಕವಾಗಿರುವ ಆಧುನಿಕ ಖಗೋಳ ವಿಜ್ಞಾನವು ಸ್ಪಷ್ಟವಾಗಿ ಹೇಳುತ್ತದೆ.[1]

ಇದು ಆಧುನಿಕ ಖಗೋಳಶಾಸ್ತ್ರದ ವಿವಾದರಹಿತ ಸಿದ್ಧಾಂತಗಳ ಪೈಕಿ ಒಂದಾಗಿದೆ. ಈ 'ಹೊಗೆ'ಯ ಅವಶೇಷಗಳಿಂದ ಹೊಸ ಹೊಸ ನಕ್ಷತ್ರಗಳು ಉದ್ಭವಿಸುವುದನ್ನು ವಿಜ್ಞಾನಿಗಳು ಈಗ ಕಾಣುತ್ತಿದ್ದಾರೆ. (ನೋಡಿ: ಚಿತ್ರ 10 ಮತ್ತು 11). ರಾತ್ರಿ ವೇಳೆಯಲ್ಲಿ ನಾವು ಕಾಣುತ್ತಿರುವ ನಕ್ಷತ್ರಗಳು ಸೇರಿದಂತೆ ಈ ಸಂಪೂರ್ಣ ಪ್ರಪಂಚವು ಆ 'ಹೊಗೆ'ಯ ದ್ರವ್ಯದಲ್ಲಿ ಸೇರಿದ್ದಾಗಿತ್ತು. ದೇವನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

> ﴾**ಅದರ ಹೊರತಾಗಿ ಅವನು ಆಕಾಶದೆಡೆಗೆ ತಿರುಗಿದನು. ಅದೊಂದು ಹೊಗೆಯಾಗಿತ್ತು...**﴿ (ಕುರ್‌ಆನ್ 41:11)

ಭೂಮಿ ಮತ್ತು ಆಕಾಶಗಳು (ಅಂದರೆ ಸೂರ್ಯ, ಚಂದ್ರ, ನಕ್ಷತ್ರಗಳು, ಗ್ರಹಗಳು, ಆಕಾಶಗಂಗೆಗಳು ಇತ್ಯಾದಿ) ಈ 'ಹೊಗೆ'ಯಿಂದಲೇ ನಿರ್ಮಾಣವಾಗಿರುವುದರಿಂದ ಭೂಮಿ ಮತ್ತು ಆಕಾಶಗಳು ಏಕ ಅಸ್ತಿತ್ವವನ್ನು ಹೊಂದಿದ್ದವು ಎಂದು ಹೇಳಬಹುದಾಗಿದೆ. ತರುವಾಯ ಈ ಏಕ ಅಸ್ತಿತ್ವವಾದ 'ಹೊಗೆ'ಯಿಂದ ಅವು ಬೇರ್ಪಟ್ಟವು. ದೇವನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

> ﴾**ಆಕಾಶಗಳು ಮತ್ತು ಭೂಮಿಯು ಪರಸ್ಪರ ಅಂಟಿಕೊಂಡಿತ್ತು, ತರುವಾಯ ಅದನ್ನು ನಾವು ಬೇರ್ಪಡಿಸಿದೆವು ಎಂದು ಸತ್ಯನಿಷೇಧಿಗಳು ಕಾಣುವುದಿಲ್ಲವೇ?...**﴿ (ಕುರ್‌ಆನ್ 21:30)

ಡಾ| ಆಲ್ಫ್ರೆಡ್ ಕ್ರೋನರ್ ಎಂಬವರು ವಿಶ್ವಪ್ರಸಿದ್ಧ ಭೂವಿಜ್ಞಾನಿಗಳ ಪೈಕಿ ಒಬ್ಬರು. ಅವರು ಜರ್ಮನಿಯ ಮೈನ್ಝ್‌ನಲ್ಲಿರುವ ಜೊಹಾನೆಸ್ ಗುಟೆನ್‌ಬರ್ಗ್ ವಿಶ್ವವಿದ್ಯಾಲಯದ ಇನ್ಸ್‌ಟಿಟ್ಯೂಟ್ ಆಫ್ ಜಿಯೋಸಯನ್ಸ್‌ನಲ್ಲಿ ಭೂವಿಜ್ಞಾನದ ಪ್ರಾಧ್ಯಾಪಕರೂ, ಭೂವಿಜ್ಞಾನ ವಿಭಾಗದ ಅಧ್ಯಕ್ಷರೂ ಆಗಿದ್ದಾರೆ. ಅವರು ಹೇಳಿದರು: "ಮುಹಮ್ಮದ್ ಎಲ್ಲಿಂದ ಬಂದರು ಎಂಬುದನ್ನು ಆಲೋಚಿಸಿದರೆ..... ಪ್ರಪಂಚದ ಉಗಮ ಮೊದಲಾದ ವಿಷಯಗಳ ಬಗ್ಗೆ ಅವರಿಗೆ ಜ್ಞಾನವಿತ್ತೆನ್ನುವುದು ಅಸಂಭವವೆಂದು ನಾನು ಭಾವಿಸುತ್ತೇನೆ. ಯಾಕೆಂದರೆ ವಿಜ್ಞಾನಿಗಳು ಇವುಗಳನ್ನು ಸಂಶೋಧಿಸಿದ್ದು ತೀರಾ ಇತ್ತೀಚೆಗಾಗಿದೆ, ಅದೂ ಅತ್ಯಂತ ಸುಧಾರಿತ ಮತ್ತು ಅತ್ಯಾಧುನಿಕ ತಾಂತ್ರಿಕ ವಿಧಾನಗಳ ಮೂಲಕವಾಗಿದೆ."[2] ಅವರು ಮುಂದುವರಿದು

---

1. *The First Three Minutes, a Modern View of the Origin of the Universe*, Weinberg, pp. 94-105.
2. ಈ ಅಭಿಪ್ರಾಯದ ಮೂಲವು ದಿಸ್ ಈಸ್ ದ ಟ್ರೂತ್ ಎಂಬ ವೀಡಿಯೋ ಟೇಪ್‌ನಲ್ಲಿದೆ. ಇದನ್ನು ಮತ್ತು ಪ್ರೊ| ಆಲ್ಫ್ರೆಡ್ ಕ್ರೋನರ್‌ರವರ ಇತರ ಅಭಿಪ್ರಾಯಗಳನ್ನು ನೋಡಲು *http://www.islam-guide.com/truth.htm* ಎಂಬ ವೆಬ್‌ಸೈಟನ್ನು ಸಂದರ್ಶಿಸಿರಿ.



**ಚಿತ್ರ 10**. ಪ್ರಪಂಚದ ಉಗಮದ ಮೂಲವಾದ 'ಹೊಗೆ'ಯ ಅವಶೇಷಗಳಲ್ಲಿ ಸೇರಿದ ಅನಿಲ ಮತ್ತು ಧೂಳಿನ ಮೋಡದಿಂದ (ನೆಬ್ಯುಲ) ಹೊಸ ನಕ್ಷತ್ರವೊಂದು ಹುಟ್ಟುತ್ತಿರುವುದು. [*The Space Atlas*, Heather and Henbest, p. 50.]



**ಚಿತ್ರ 11**. ಅನಿಲ ಮತ್ತು ಧೂಳಿನ ಮೋಡವಾಗಿರುವ ಲಗೂನ್ ನೆಬ್ಯುಲ. ಇದರ ವ್ಯಾಸವು ಸುಮಾರು 60 ಬೆಳಕಿನ ವರ್ಷಗಳಾಗಿವೆ. ಇದು ಇದರ ಒಡಲೊಳಗೆ ಇತ್ತೀಚೆಗೆ ನೂತನವಾಗಿ ಉದ್ಭವಿಸಿದ ಬಿಸಿ ನಕ್ಷತ್ರಗಳ ನೇರಳಾತೀತ ವಿಕಿರಣದಿಂದ ಉತ್ತೇಜಿತಗೊಂಡಿದೆ. [*Horizons, Exploring the Universe*, Seeds, plate 9, from Association of Universities for Research in Astronomy, Inc.]

ಹೇಳುತ್ತಾರೆ: "ಹದಿನಾಲ್ಕು ಶತಮಾನಗಳ ಹಿಂದೆ ಬೈಜಿಕ ಭೌತವಿಜ್ಞಾನದ (nuclear physics) ಬಗ್ಗೆ ಸ್ವಲ್ಪವೂ ತಿಳಿದಿರದ ಒಬ್ಬ ವ್ಯಕ್ತಿ ತನ್ನ ಮಿದುಳನ್ನು ಉಪಯೋಗಿಸಿ ಭೂಮಿ ಮತ್ತು ಆಕಾಶಗಳು ಏಕ ಅಸ್ತಿತ್ವವನ್ನು ಹೊಂದಿದ್ದವು ಎಂದು ಹೇಳುವುದು ಸಾಧ್ಯವೇ ಇಲ್ಲ."[1]

## ಈ) ಮಿದುಳಿನ ಬಗ್ಗೆ ಕುರ್‌ಆನ್

ಕಅ್‌ಬಾದ ಬಳಿ ಪ್ರಾರ್ಥನೆ ಮಾಡುವುದರಿಂದ ಮುಹಮ್ಮದ್(ﷺ)ರನ್ನು ತಡೆದ ಒಬ್ಬ ಸತ್ಯನಿಷೇಧಿಯ ಬಗ್ಗೆ ದೇವನು ಹೇಳುತ್ತಾನೆ:

> ﴾**ನಿಸ್ಸಂದೇಹವಾಗಿಯೂ, ಅವನು ನಿಲ್ಲಿಸದಿದ್ದರೆ ಖಂಡಿತವಾಗಿಯೂ ನಾವು ಮುಂದಲೆಯನ್ನು ಹಿಡಿದು ಎಳೆಯುವೆವು. ಸುಳ್ಳು ನುಡಿಯುವ, ಪಾಪವೆಸಗುವ ಮುಂದಲೆಯನ್ನು...**﴿ (ಕುರ್‌ಆನ್ 96:15–16)

ಕುರ್‌ಆನ್ ಮುಂದಲೆಯನ್ನು ಸುಳ್ಳು ನುಡಿಯುವ ಮತ್ತು ಪಾಪವೆಸಗುವ ಮುಂದಲೆಯೆಂದು ಯಾಕೆ ವರ್ಣಿಸಿತು? ಆ ವ್ಯಕ್ತಿ ಸುಳ್ಳು ನುಡಿಯುತ್ತಾನೆ ಮತ್ತು ಪಾಪವೆಸಗುತ್ತಾನೆಂದು ಕುರ್‌ಆನ್ ಯಾಕೆ ಹೇಳಲಿಲ್ಲ? ಮುಂದಲೆಗೆ ಮತ್ತು ಸುಳ್ಳು ನುಡಿಯುವುದಕ್ಕೆ ಹಾಗೂ ಪಾಪವೆಸಗುವುದಕ್ಕೆ ಏನು ಸಂಬಂಧ?

ತಲೆ ಬುರುಡೆಯ ಮುಂಭಾಗದೊಳಗೆ ನೋಡಿದರೆ ಮುಮ್ಮಿದುಳಿನ ಮುಂಭಾಗದ ಪ್ರದೇಶವನ್ನು (prefrontal area) ನಾವು ಕಾಣುತ್ತೇವೆ. (ನೋಡಿ: ಚಿತ್ರ 12). ಈ ಪ್ರದೇಶದ ಕೆಲಸದ ಬಗ್ಗೆ ಶರೀರಶಾಸ್ತ್ರವು ಏನೆನ್ನುತ್ತದೆ? 'ಎಸೆನ್ಶಿಯಲ್ಸ್ ಆಫ್ ಅನಾಟಮಿ & ಫಿಸಿಯಾಲಜಿ' ಎಂಬ ಗ್ರಂಥವು ಈ ಪ್ರದೇಶದ ಬಗ್ಗೆ ಹೇಳುತ್ತದೆ: "ಉಪಾಯ ಹೂಡಲು ಮತ್ತು ಚಲನವಲನಗಳನ್ನು ಆರಂಭಿಸಲು ಪ್ರೇರಣೆ ಮತ್ತು ಮುನ್ನರಿವು ಉಂಟಾಗುವುದು **ಮುಂಭಾಗದ ಪ್ರದೇಶ** ಎಂದು ಕರೆಯಲಾಗುವ ಮುಂಭಾಗದ ಹಾಲೆಗಳ ಮುಂಬದಿಯಲ್ಲಾಗಿದೆ."[2] ಆ ಗ್ರಂಥವು ಮುಂದುವರಿದು ಹೇಳುತ್ತದೆ: "ಪ್ರೇರಣೆ ನೀಡುವುದರಲ್ಲಿ ಅದು ತನ್ನನ್ನು ತೊಡಗಿಸಿಕೊಂಡಿರುವುದಕ್ಕೆ ಸಂಬಂಧಿಸಿದಂತೆ ಮುಂಭಾಗದ ಪ್ರದೇಶವು ಆಕ್ರಮಣಶೀಲತೆಯ ಕ್ರಿಯಾತ್ಮಕ ಕೇಂದ್ರವಾಗಿದೆಯೆಂದೂ ಭಾವಿಸಲಾಗುತ್ತಿದೆ."[3]

ಆದ್ದರಿಂದ, ಮಿದುಳಿನ ಈ ಭಾಗವು ಉಪಾಯ ಹೂಡಲು, ಪ್ರೇರಣೆ ನೀಡಲು ಒಳ್ಳೆಯ ಅಥವಾ ಕೆಟ್ಟ ಸ್ವಭಾವವನ್ನು ಪ್ರಕಟಿಸಲು ಕಾರಣವಾಗಿದೆ. ಹಾಗೆಯೇ ಸುಳ್ಳು ನುಡಿಯಲು ಅಥವಾ ಸತ್ಯ ನುಡಿಯಲೂ ಇದೇ ಕಾರಣವಾಗಿದೆ. ಆದ್ದರಿಂದ ಕುರ್‌ಆನ್ ಮುಂದಲೆಯನ್ನು ಸುಳ್ಳು ನುಡಿಯುವ ಹಾಗೂ ಪಾಪವೆಸಗುವ ಮುಂದಲೆ ಎಂದು ಕರೆದಿರುವುದು ಸೂಕ್ತವಾಗಿದೆ.

1. ದಿಸ್ ಈಸ್ ದ ಟ್ರೂತ್ ಎಂಬ ವೀಡಿಯೋ ಟೇಪ್.
2. *Essentials of Anatomy&Physiology*, Seeley and others, p. 211. Also see *The Human Nervous System*, Noback and others, pp. 410-411.
3. *Essentials of Anatomy & Physiology*, Seeley and others, p. 211.




**ಚಿತ್ರ 12**. ಮಿದುಳಿನ ಎಡ ಅರ್ಧಗೋಳಾಕೃತಿಯ ಕಾರ್ಯಕಾರಿ ಪ್ರದೇಶಗಳು. ಮುಂಭಾಗದ ಪ್ರದೇಶವು ಮಿದುಳಿನ ಮುಂಭಾಗದಲ್ಲಿರುವುದನ್ನು ಕಾಣಬಹುದು. [*Essentials of Anatomy & Physiology*, Seeley and others, p. 210.]

ಪ್ರೊ| ಕೀತ್ ಎಲ್. ಮೂರ್‌ರವರ ಪ್ರಕಾರ ವಿಜ್ಞಾನಿಗಳು ಮುಂಭಾಗದ ಪ್ರದೇಶದ ಕೆಲಸ ಕಾರ್ಯಗಳ ಬಗ್ಗೆ ಸಂಶೋಧನೆ ನಡೆಸಿದ್ದು ಕಳೆದ 60 ವರ್ಷಗಳಿಂದಾಗಿತ್ತು.(1)

## ಉ) ಸಮುದ್ರ ಮತ್ತು ನದಿಗಳ ಬಗ್ಗೆ ಕುರ್‌ಆನ್

ಎಲ್ಲಿ ಎರಡು ಸಮುದ್ರಗಳು ಸಂಧಿಸುತ್ತವೆಯೋ ಅಲ್ಲಿ ಅವುಗಳ ಮಧ್ಯೆ ಒಂದು ತಡೆಗೋಡೆಯಿದೆಯೆಂದು ಆಧುನಿಕ ವಿಜ್ಞಾನವು ಸಂಶೋಧಿಸಿದೆ. ಈ ತಡೆಗೋಡೆಯು ಎರಡು ಸಮುದ್ರಗಳನ್ನು ಯಾವ ರೀತಿ ಪ್ರತ್ಯೇಕಿಸುತ್ತದೆಯೆಂದರೆ ಪ್ರತಿಯೊಂದು ಸಮುದ್ರವೂ ಅದರದ್ದೇ ಆದ ತಾಪಮಾನ, ಲವಣಾಂಶ ಮತ್ತು ಸಾಂದ್ರತೆಯನ್ನು ಹೊಂದಿರುತ್ತದೆ.(2) ಉದಾಹರಣೆಗೆ, ಅಟ್ಲಾಂಟಿಕ್ ಸಮುದ್ರಕ್ಕೆ ಹೋಲಿಸಿದರೆ ಮೆಡಿಟರೇನಿಯನ್ ಸಮುದ್ರವು ಬೆಚ್ಚಗಿನ, ಲವಣಯುಕ್ತ, ಕಡಿಮೆ ಸಾಂದ್ರತೆಯಿರುವ ಸಮುದ್ರವಾಗಿದೆ. ಮೆಡಿಟರೇನಿಯನ್ ಸಮುದ್ರದ ನೀರು ಜಿಬ್ರಾಲ್ಟರ್ ಹೊಸ್ತಿಲಿನ ಮೂಲಕ ಅಟ್ಲಾಂಟಿಕ್ ಸಮುದ್ರವನ್ನು ಪ್ರವೇಶಿಸುವಾಗ, ಅದು ಅಟ್ಲಾಂಟಿಕ್ ಸಮುದ್ರದೊಳಗೆ 1000 ಮೀಟರ್ ಆಳದಲ್ಲಿ ಹಲವು ನೂರು ಕಿಲೋಮೀಟರ್‌ಗಳ ತನಕ

---

1. *Al-E'jaz al-Elmy fee al-Naseyah (The Scientific Miracles in the Front of the Head)*, Moore and others, p. 41.
2. *Principles of Oceanography*, Davis, pp. 92-93.

ತನ್ನದೇ ತಾಪಮಾನ, ಲವಣಾಂಶ ಮತ್ತು ಸಾಂದ್ರತೆಯೊಂದಿಗೆ ಹರಿಯುತ್ತದೆ.[1] (ನೋಡಿ: ಚಿತ್ರ 13)




**ಚಿತ್ರ 13.** ಮೆಡಿಟರೇನಿಯನ್ ಸಮುದ್ರದ ನೀರು ಜಿಬ್ರಾಲ್ಟರ್ ಹೊಸ್ತಿಲಿನ ಮೂಲಕ ಅಟ್ಲಾಂಟಿಕ್ ಸಮುದ್ರವನ್ನು ತನ್ನದೇ ತಾಪಮಾನ, ಲವಣಾಂಶ ಮತ್ತು ಸಾಂದ್ರತೆಯೊಂದಿಗೆ ಪ್ರವೇಶಿಸುತ್ತದೆ. ಯಾಕೆ ಂದರೆ ಅವುಗಳನ್ನು ಪರಸ್ಪರ ಬೇರ್ಪಡಿಸುವ ತಡೆಗೋಡೆಯೊಂದು ಅವುಗಳ ಮಧ್ಯೆಯಿದೆ. ತಾಪಮಾನವು ಡಿಗ್ರಿ ಸೆಲ್ಸಿಯಸ್(C°)ನಲ್ಲಿದೆ. [*Marine Geology*, Kuenen, p. 43, with a slight enhancement.]

ಸಮುದ್ರಗಳಲ್ಲಿ ದೊಡ್ಡ ದೊಡ್ಡ ಅಲೆಗಳು, ಪ್ರಬಲವಾದ ಹರಿವು ಮತ್ತು ಅಲೆಯುಬ್ಬರಗಳು ಉಂಟಾದರೂ ಸಹ ಇವು ಪರಸ್ಪರ ಬೆರೆಯಲಾರದು ಮತ್ತು ಒಂದನ್ನೊಂದು ಅತಿಕ್ರಮಣ ಮಾಡಲಾರದು.

ಪರಸ್ಪರ ಸಂಧಿಸುವ ಎರಡು ಸಮುದ್ರಗಳ ಮಧ್ಯೆ ಒಂದು ತಡೆಗೋಡೆಯಿದೆ ಮತ್ತು ಅವು ಒಂದನ್ನೊಂದು ಅತಿಕ್ರಮಿಸುವುದಿಲ್ಲವೆಂದು ಪವಿತ್ರ ಕುರ್‌ಆನ್ ಹೇಳುತ್ತದೆ. ದೇವನು ಹೇಳಿದನು:

> ﴾**ಅವನು ಎರಡು ಸಮುದ್ರಗಳನ್ನು ಪರಸ್ಪರ ಬೆರೆಯುವಂತೆ ಬಿಟ್ಟಿರುವನು. ಅವೆರಡರ ಮಧ್ಯೆ ಒಂದು ತಡೆಗೋಡೆಯಿರುವುದು. ಅವು ಒಂದನ್ನೊಂದು ಅತಿಕ್ರಮಿಸಲಾರವು.**﴿ (ಕುರ್‌ಆನ್ 55:19–20)

ಆದರೆ ಶುದ್ಧ ನೀರು ಮತ್ತು ಉಪ್ಪು ನೀರಿನ ಮಧ್ಯೆಯಿರುವ ವಿಭಾಜಕದ ಬಗ್ಗೆ ಮಾತನಾಡುವಾಗ ಈ ತಡೆಗೋಡೆಯ ಜೊತೆಗೆ 'ಬಲಿಷ್ಠವಾದ ಒಂದು ಪರದೆ'ಯೂ ಇದೆ ಯೆಂದು ಕುರ್‌ಆನ್ ಹೇಳುತ್ತದೆ. ದೇವನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

> ﴾**ಎರಡು ರೀತಿಯ ನೀರನ್ನು ಸ್ವತಂತ್ರವಾಗಿ ಹರಿಯಲು ಬಿಟ್ಟವನು ಅವನಾಗಿರುವನು. ಒಂದು ತಿಳಿಯಾದ ಶುದ್ಧಜಲವೂ ಇನ್ನೊಂದು ಕಹಿಯಾದ ಉಪ್ಪು ನೀರೂ ಆಗಿದೆ. ಅವನು ಅವೆರಡರ ಮಧ್ಯೆ ಒಂದು ತಡೆಗೋಡೆಯನ್ನೂ, ಬಲಿಷ್ಠವಾದ ಒಂದು ಪರದೆಯನ್ನೂ ಸ್ಥಾಪಿಸಿರುವನು.**﴿ (ಕುರ್‌ಆನ್ 25:53)

1. *Principles of Oceanography*, Davis, p. 93.

ಶುದ್ಧ ನೀರು ಮತ್ತು ಉಪ್ಪು ನೀರಿನ ಮಧ್ಯೆಯಿರುವ ವಿಭಾಜಕದ ಬಗ್ಗೆ ಮಾತನಾಡುವಾಗ ಅದನ್ನು ತಡೆಗೋಡೆ ಮತ್ತು ಬಲಿಷ್ಠ ಪರದೆಯೆಂದು ಕರೆಯುವ ಕುರ್‌ಆನ್ ಎರಡು ಸಮುದ್ರಗಳ ಮಧ್ಯೆಯಿರುವ ವಿಭಾಜಕದ ಬಗ್ಗೆ ಮಾತನಾಡುವಾಗ ಹಾಗೇಕೆ ಹೇಳುವುದಿಲ್ಲ ಎಂದು ಯಾರಾದರೂ ಪ್ರಶ್ನಿಸಬಹುದು.

ಆಧುನಿಕ ವಿಜ್ಞಾನದ ಸಂಶೋಧನೆ ಪ್ರಕಾರ ಶುದ್ಧ (ಸಿಹಿ) ನೀರು ಮತ್ತು ಉಪ್ಪು ನೀರು ಸಂಧಿಸುವ ನದೀಮುಖಗಳಲ್ಲಿನ (estuary) ಸ್ಥಿತಿಯು ಎರಡು ಸಮುದ್ರಗಳು ಸಂಧಿಸುವಲ್ಲಿನ ಸ್ಥಿತಿಗಿಂತ ಭಿನ್ನವಾಗಿದೆ. ನದೀಮುಖಗಳಲ್ಲಿ ಶುದ್ಧ ನೀರನ್ನು ಉಪ್ಪು ನೀರಿನಿಂದ ಪ್ರತ್ಯೇಕಿಸುವುದು 'ಗುರುತಿಸಲಾದ ಸಾಂದ್ರತೆ ನಿರಂತರತೆಯನ್ನು ಹೊಂದಿರುವ, ಎರಡು ಪದರಗಳನ್ನು ಪ್ರತ್ಯೇಕಿಸುವ ಪೈಕ್ನೋಕ್ಲೈನ್ ವಲಯ (pycnocline zone)'ವಾಗಿದೆಯೆಂದು ಆಧುನಿಕ ವಿಜ್ಞಾನವು ಹೇಳುತ್ತದೆ.(1) ಈ ವಿಭಾಜಕವು (ಪ್ರತ್ಯೇಕಿಸುವ ವಲಯವು) ಶುದ್ಧ ನೀರು ಹಾಗೂ ಉಪ್ಪುನೀರು ಎಂಬ ಎರಡು ವಿಧ ನೀರಿನಿಂದಲೂ ಭಿನ್ನವಾದ ಲವಣಾಂಶವನ್ನು ಹೊಂದಿರುತ್ತದೆ.(2) (ನೋಡಿ: ಚಿತ್ರ 14)




**ಚಿತ್ರ 14**. ನದೀಮುಖದಲ್ಲಿ ಲವಣಾಂಶವನ್ನು (ಪ್ರತಿ ಸಹಸ್ರ ‰ ಭಾಗಗಳಲ್ಲಿ) ತೋರಿಸುವ ರೇಖಾಂಶ ಚಿತ್ರ. ಶುದ್ಧನೀರು ಮತ್ತು ಉಪ್ಪು ನೀರಿನ ಮಧ್ಯೆಯಿರುವ ವಿಭಾಜಕ (ಪ್ರತ್ಯೇಕಿಸುವ ವಲಯ)ವನ್ನು ಇಲ್ಲಿ ಕಾಣಬಹುದಾಗಿದೆ. [*Introductory Oceanography*, Thurman, p. 301, with a slight enhancement.]

ತಾಪಮಾನ, ಲವಣಾಂಶ, ಸಾಂದ್ರತೆ ಹಾಗೂ ಆಮ್ಲಜನಕದ ಕರಗುವಿಕೆ ಇತ್ಯಾದಿಗಳನ್ನು ಅಳೆಯುವ ಆಧುನಿಕ ಉಪಕರಣಗಳ ಸಹಾಯದಿಂದ ಈ ಮಾಹಿತಿಯನ್ನು ತೀರಾ ಇತ್ತೀಚೆಗೆ ಸಂಶೋಧಿಸಲಾಗಿದೆ. ಎರಡು ಸಮುದ್ರಗಳು ಸಂಧಿಸುವಾಗ ಅವುಗಳ ಮಧ್ಯೆಯಿರುವ ವ್ಯತ್ಯಾಸವನ್ನು ನಗ್ನ ನೇತ್ರಗಳ ಮೂಲಕ ಕಾಣಲು ಸಾಧ್ಯವಿಲ್ಲ. ಯಾಕೆಂದರೆ ಅವೆರಡೂ ಒಂದೇ ರೀತಿಯಿರುವುದಾಗಿ ನಮಗೆ ಗೋಚರವಾಗುತ್ತದೆ. ಹಾಗೆಯೇ, ನದೀಮುಖಗಳಲ್ಲಿ ನೀರು ಮೂರು ವಿಧಗಳಲ್ಲಿ ಅಂದರೆ ಶುದ್ಧ ನೀರು, ಉಪ್ಪು ನೀರು ಮತ್ತು ವಿಭಾಜಕ (ಪ್ರತ್ಯೇಕಿಸುವ ವಲಯ)ವಾಗಿ ವಿಭಜನೆಯಾಗುವುದನ್ನೂ ನಗ್ನ ನೇತ್ರದಿಂದ ಕಾಣಲು ಸಾಧ್ಯವಿಲ್ಲ.

---

1. *Oceanography*, Gross, p. 242. Also see *Introductory Oceanography*, Thurman, pp. 300-301.
2. *Oceanography*, Gross, p. 244, and *Introductory Oceanography*, Thurman, pp. 300-301.

## ಊ) ಆಳ ಸಮುದ್ರ ಮತ್ತು ಆಂತರಿಕ ಅಲೆಗಳ ಬಗ್ಗೆ ಕುರ್‌ಆನ್

ದೇವನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

> ﴿**ಅಥವಾ** (ಸತ್ಯನಿಷೇಧಿಗಳ ಸ್ಥಿತಿಯು) **ಆಳ ಸಮುದ್ರದಲ್ಲಿರುವ ಅಂಧಕಾರದಂತಿದೆ. ಅಲೆಗಳು ಅದನ್ನು ಮುಚ್ಚಿವೆ. ಅದರ ಮೇಲೆಯೂ ಅಲೆಗಳಿವೆ. ಅದರ ಮೇಲೆ ಮೋಡಗಳಿವೆ. ಒಂದರ ಮೇಲೆ ಒಂದರಂತಿರುವ ಅನೇಕ ಅಂಧಕಾರಗಳು. ಯಾರಾದರೂ ತನ್ನ ಕೈಯನ್ನು ಹೊರ ಚಾಚಿದರೆ ಅವನು ಅದನ್ನು ಕಾಣಲಾರನು....**﴾ (ಕುರ್‌ಆನ್ 24:40)

ಆಳ ಸಮುದ್ರಗಳಲ್ಲಿ ಮತ್ತು ಮಹಾ ಸಾಗರಗಳಲ್ಲಿರುವ ಅಂಧಕಾರದ ಬಗ್ಗೆ ಈ ಸೂಕ್ತಿಯು ಮಾತನಾಡುತ್ತದೆ. ಅಲ್ಲಿ ಯಾರಾದರೂ ತನ್ನ ಕೈಯನ್ನು ಹೊರಚಾಚಿದರೆ ಅವನು ಅದನ್ನು ಕಾಣಲಾರನು. ಆಳ ಸಮುದ್ರಗಳಲ್ಲಿ ಮತ್ತು ಮಹಾ ಸಾಗರಗಳಲ್ಲಿ ಈ ಅಂಧಕಾರವು ಕಂಡು ಬರುವುದು 200 ಮೀಟರ್ ಆಳದಲ್ಲಿ ಮತ್ತು ಅದಕ್ಕಿಂತ ಕೆಳಗಿನಲ್ಲಾಗಿದೆ. ಈ ಆಳದಲ್ಲಿ ಬಹುತೇಕ ಬೆಳಕೇ ಇಲ್ಲ. (ನೋಡಿ: ಚಿತ್ರ 15). 1000 ಮೀಟರ್‌ಗಿಂತಲೂ ಕೆಳಗೆ ಬೆಳಕೆಂಬುದು ಇಲ್ಲವೇ ಇಲ್ಲ.[(1)] ಸಬ್‌ಮೆರಿನ್ ಅಥವಾ ವಿಶೇಷ ಉಪಕರಣಗಳ ಸಹಾಯದಿಂದಲ್ಲದೆ ಮನುಷ್ಯನಿಗೆ




**ಚಿತ್ರ 15**. ಸೂರ್ಯನ ಬೆಳಕು 3 ರಿಂದ 30ರಷ್ಟು ಸಮುದ್ರದ ಮೇಲ್ಮೈಯಲ್ಲಿ ಪ್ರತಿಫಲನಗೊಳ್ಳುತ್ತದೆ. ನೀಲಿ ಬಣ್ಣದ ಹೊರತು ಬೆಳಕಿನ ಏಳು ಬಣ್ಣಗಳ ಪೈಕಿ ಹೆಚ್ಚಿನವುಗಳೂ ಒಂದರ ಬಳಿಕ ಒಂದರಂತೆ ಮೊದಲ 200 ಮೀಟರ್‌ಗಳಲ್ಲಿ ಹೀರಲ್ಪಡುತ್ತವೆ. [*Oceans*, Elder and Pernetta, p. 27.]

1. *Oceans*, Elder and Pernetta, p. 27.

40 ಮೀಟರ್‌ಗಿಂತಲೂ ಕೆಳಗೆ ಮುಳುಗಲು ಸಾಧ್ಯವಿಲ್ಲ. ಸಾಗರದ ಆಳ ಅಂಧಕಾರ ತುಂಬಿದ ಭಾಗದಲ್ಲಿ, ಅಂದರೆ 200 ಮೀಟರ್‌ಗಳಷ್ಟು ಆಳದಲ್ಲಿ ಯಾವುದೇ ಉಪಕರಣಗಳ ಸಹಾಯವಿಲ್ಲದೆ ಬದುಕುಳಿಯಲು ಮನುಷ್ಯನಿಗೆ ಖಂಡಿತ ಸಾಧ್ಯವಿಲ್ಲ.

ವಿಜ್ಞಾನಿಗಳು ಈ ಅಂಧಕಾರವನ್ನು ಸಂಶೋಧಿಸಿದ್ದು ತೀರಾ ಇತ್ತೀಚೆಗೆ ವಿಶೇಷ ಉಪಕರಣಗಳು ಮತ್ತು ಸಬ್‌ಮೆರಿನ್‌ಗಳನ್ನು ಬಳಸಿ ಆಳ ಸಮುದ್ರಕ್ಕಿಳಿಯುವ ಮೂಲಕವಾಗಿತ್ತು.

ಇದೇ ಸೂಕ್ತಿಯಲ್ಲಿರುವ **"ಅಲೆಗಳು ಅದನ್ನು ಮುಚ್ಚಿವೆ. ಅದರ ಮೇಲೆಯೂ ಅಲೆಗಳಿವೆ. ಅದರ ಮೇಲೆ ಮೋಡಗಳಿವೆ"** ಎಂಬ ವಾಕ್ಯಗಳಿಂದ ಸಮುದ್ರ ಮತ್ತು ಸಾಗರಗಳ ಆಳದಲ್ಲಿರುವ ನೀರು ಅಲೆಗಳಿಂದ ಮುಚ್ಚಲ್ಪಟ್ಟಿವೆ ಮತ್ತು ಆ ಅಲೆಗಳ ಮೇಲೆ ಬೇರೆ ಅಲೆಗಳಿವೆಯೆಂದು ನಮಗೆ ತಿಳಿದು ಬರುತ್ತದೆ. ಈ ಮೇಲಿನ ಅಲೆಗಳು ಸಮುದ್ರದ ಮೇಲ್ಮೈಯಲ್ಲಿ ನಾವು ಕಾಣುವ ಅಲೆಗಳಾಗಿವೆ ಎಂಬುದು ಸ್ಪಷ್ಟ. ಯಾಕೆಂದರೆ ಈ ಮೇಲಿನ ಅಲೆಗಳ ಮೇಲೆ ಮೋಡಗಳಿವೆಯೆಂದು ಈ ಸೂಕ್ತಿಯು ಪ್ರಸ್ತಾಪಿಸುತ್ತದೆ. ಆದರೆ ಈ ಕೆಳಗಿನ ಅಲೆಗಳು ಯಾವುವು? ವಿಜ್ಞಾನಿಗಳು ತೀರಾ ಇತ್ತೀಚೆಗೆ ಸಂಶೋಧಿಸಿರುವ ಪ್ರಕಾರ ಸಮುದ್ರಗಳಲ್ಲಿ ಆಂತರಿಕ ಅಲೆಗಳಿವೆ. ಈ ಅಲೆಗಳು ವಿಭಿನ್ನ ಸಾಂದ್ರತೆಗಳುಳ್ಳ ಪದರಗಳು ಪರಸ್ಪರ ಸಂಧಿಸುವ ಸ್ಥಳದಲ್ಲಿ ಉದ್ಭವಿಸುತ್ತವೆ.[1] (ನೋಡಿ: ಚಿತ್ರ 16) ಆಂತರಿಕ ಅಲೆಗಳು ಸಮುದ್ರ ಮತ್ತು ಸಾಗರಗಳ ಆಳದಲ್ಲಿರುವ ನೀರನ್ನು ಮುಚ್ಚುತ್ತವೆ.




**ಚಿತ್ರ 16**. ವಿಭಿನ್ನ ಸಾಂದ್ರತೆಗಳನ್ನು ಹೊಂದಿರುವ ನೀರಿನ ಎರಡು ಪದರಗಳ ಮಧ್ಯೆ ಆಂತರಿಕ ಅಲೆಗಳು ಉದ್ಭವಿಸುತ್ತಿರುವುದು. ಕೆಳಗಿರುವ ನೀರು ಹೆಚ್ಚು ಸಾಂದ್ರತೆಯನ್ನು ಹೊಂದಿದ್ದರೆ ಮೇಲಿರುವ ನೀರು ಕಡಿಮೆ ಸಾಂದ್ರತೆಯನ್ನು ಹೊಂದಿದೆ. [*Oceanography*, Gross, p. 204.]

1. *Oceanography*, Gross, p. 205.

ಯಾಕೆಂದರೆ ಸಮುದ್ರದ ಆಳದಲ್ಲಿರುವ ನೀರು ಅದರ ಮೇಲಿರುವ ನೀರಿಗಿಂತಲೂ ಹೆಚ್ಚಿನ ಸಾಂದ್ರತೆಯನ್ನು ಹೊಂದಿರುತ್ತದೆ. ಆಂತರಿಕ ಅಲೆಗಳು ಸಮುದ್ರದ ಹೊರಮೈಯಲ್ಲಿರುವ ಅಲೆಗಳಂತೆಯೇ ವರ್ತಿಸುತ್ತವೆ. ಆಂತರಿಕ ಅಲೆಗಳನ್ನು ನಗ್ನ ನೇತ್ರಗಳಿಂದ ಕಾಣಲು ಸಾಧ್ಯವಿಲ್ಲ. ಬದಲಾಗಿ ಒಂದು ನಿರ್ದಿಷ್ಟ ಸ್ಥಳದಲ್ಲಿ ತಾಪಮಾನ ಅಥವಾ ಲವಣಾಂಶ ಬದಲಾವಣೆಗಳನ್ನು ಅಧ್ಯಯನ ಮಾಡುವ ಮೂಲಕ ಪತ್ತೆಹಚ್ಚಬಹುದಾಗಿದೆ.[1]

## ಎ) ಮೋಡಗಳ ಬಗ್ಗೆ ಕುರ್‌ಆನ್



ವಿಜ್ಞಾನಿಗಳು ಮೋಡಗಳ ವಿಧಗಳನ್ನು ಅಧ್ಯಯನ ಮಾಡಿದ್ದಾರೆ ಮತ್ತು ಮಳೆ ಮೋಡಗಳು ನಿರ್ಮಾಣವಾಗುವುದು ಹಾಗೂ ರೂಪುಗೊಳ್ಳುವುದು ಕೆಲವು ರೀತಿಯ ಗಾಳಿ ಮತ್ತು ಮೋಡಗಳೊಂದಿಗೆ ಸಂಪರ್ಕ ಹೊಂದಿರುವ ನಿರ್ದಿಷ್ಟ ವ್ಯವಸ್ಥೆ ಹಾಗೂ ಕ್ರಮಗಳ ಮೂಲಕವಾಗಿದೆಯೆಂದು ಅವರು ಮನಗಂಡಿದ್ದಾರೆ. ರಾಶಿಜಲಮೇಘವು (cumulonimbus cloud) ಮಳೆ ಮೋಡಗಳ ಪೈಕಿ ಒಂದಾಗಿದೆ. ರಾಶಿಜಲಮೇಘವು ಹೇಗೆ ರೂಪುಗೊಳ್ಳುತ್ತದೆ ಮತ್ತು ಅದು ಹೇಗೆ ಮಳೆ, ಆಲಿಕಲ್ಲು ಹಾಗೂ ಮಿಂಚುಗಳನ್ನು ಉತ್ಪಾದಿಸುತ್ತದೆಯೆಂಬುದನ್ನು ಪವನಶಾಸ್ತ್ರಜ್ಞರು ಅರಿತುಕೊಂಡಿದ್ದಾರೆ.

ಮಳೆಯನ್ನು ಉತ್ಪಾದಿಸಲು ರಾಶಿಜಲಮೇಘಗಳು ಈ ಕೆಳಗಿನ ಹಂತಗಳ ಮೂಲಕ ಹಾದು ಹೋಗುತ್ತವೆಯೆಂದು ಅವರು ಪತ್ತೆ ಹಚ್ಚಿದ್ದಾರೆ:

**1) ಮೋಡಗಳು ಗಾಳಿಯಿಂದ ದೂಡಲ್ಪಡುತ್ತವೆ:** ಗಾಳಿಯು ಕೆಲವು ಚಿಕ್ಕ ತುಂಡು ಮೋಡಗಳನ್ನು, ಮೋಡಗಳು ಒಟ್ಟುಗೂಡುವ ಸ್ಥಳದೆಡೆಗೆ ದೂಡುವ ಮೂಲಕ ರಾಶಿಜಲಮೇಘಗಳು ರೂಪುಗೊಳ್ಳುತ್ತವೆ. (ನೋಡಿ: ಚಿತ್ರ 17 ಮತ್ತು 18)




**ಚಿತ್ರ 17**. ಮೋಡಗಳು ಒಂದು ಸ್ಥಳದಲ್ಲಿ (B) ಒಟ್ಟುಗೂಡುವುದಕ್ಕಾಗಿ ಚಲಿಸುತ್ತಿರುವುದನ್ನು ತೋರಿಸುವ ಉಪಗ್ರಹ ಚಿತ್ರ. ಬಾಣ ಗುರುತುಗಳು ಗಾಳಿ ಬೀಸುವ ದಿಕ್ಕನ್ನು ತೋರಿಸುತ್ತಿವೆ. [*The Use of Satellite Pictures in Weather Analysis and Forecasting*, Anderson and others, p. 188.]

1. *Oceanography*, Gross, p. 205.



**ಚಿತ್ರ 18**. ಕ್ಷಿತಿಜದ ಬಳಿ ಒಟ್ಟುಗೂಡುವ ವಲಯದ ಕಡೆಗೆ ಚಲಿಸುತ್ತಿರುವ ಮೋಡಗಳ ಚಿಕ್ಕ ತುಂಡುಗಳು. [*Clouds and Storms*, Ludlam, plate 7.4.]

**2) ಸೇರುತ್ತವೆ:** ತರುವಾಯ ಸಣ್ಣ ಮೋಡಗಳು ಒಟ್ಟು ಸೇರಿ ದೊಡ್ಡ ಮೋಡಗಳಾಗಿ ಮಾರ್ಪಡುತ್ತವೆ.[(1)] (ನೋಡಿ ಚಿತ್ರ 18 ಮತ್ತು 19)




**ಚಿತ್ರ 19**. (A) ಬೇರೆ ಬೇರೆಯಾಗಿರುವ ಮೋಡದ ಚಿಕ್ಕ ತುಂಡುಗಳು. (B) ಚಿಕ್ಕ ಚಿಕ್ಕ ಮೋಡಗಳು ಒಟ್ಟು ಸೇರುವಾಗ, ದೊಡ್ಡ ಮೋಡದೊಳಗಿನ ಮೇಲೇರುವ ಒತ್ತಡದ ಗಾಳಿ ಹೆಚ್ಚಾಗುತ್ತದೆ. ಇದ–ರಿಂದಾಗಿ ಮೋಡವು ಮೇಲ್ಮುಖವಾಗಿ ಪೇರಿಸಲ್ಪಡುತ್ತದೆ. ನೀರಿನ ಬಿಂದುಗಳನ್ನು ಚುಕ್ಕಿಗಳ ಮೂಲಕ ತೋರಿಸಲಾಗಿದೆ. [*The Atmosphere*, Anthes and others, p. 269.]

1. ನೋಡಿ: *The Atmosphere*, Anthes and others, pp. 268-269, ಮತ್ತು *Elements of Meteorology*, Miller and Thompson, p. 141.

**3) ಪೇರಿಸಲ್ಪಡುತ್ತವೆ:** ಚಿಕ್ಕ ಮೋಡಗಳು ಒಟ್ಟು ಸೇರುವಾಗ, ದೊಡ್ಡ ಮೋಡದೊಳಗಿನ ಮೇಲೇರುವ ಒತ್ತಡದ ಗಾಳಿ (updraft) ಅಧಿಕವಾಗುತ್ತದೆ. ಮೇಲೇರುವ ಒತ್ತಡದ ಗಾಳಿಯು ಮೋಡದ ಅಂಚುಗಳಿಗಿಂತಲೂ ನಡುಭಾಗದಲ್ಲಿ ಹೆಚ್ಚು ಬಲವಾಗಿರುತ್ತದೆ.[1] ಈ ಮೇಲೇರುವ ಒತ್ತಡದ ಗಾಳಿಯಿಂದಾಗಿ ಮೋಡವು ಲಂಬವಾಗಿ ಬೆಳೆಯುತ್ತದೆ. ಇದರಿಂದಾಗಿ ಮೋಡವು ಮೇಲ್ಮುಖವಾಗಿ ಪೇರಿಸಲ್ಪಡುತ್ತದೆ. (ನೋಡಿ: ಚಿತ್ರ 19 (B), 20 ಮತ್ತು 21). ಮೋಡವು ವಾಯುಮಂಡಲದ ತಣ್ಣಗಿನ ಪ್ರದೇಶದೆಡೆಗೆ ಹಿಗ್ಗಲು ಈ ಲಂಬ ಬೆಳವಣಿಗೆಯು ಕಾರಣವಾಗುತ್ತದೆ ಮತ್ತು ಅಲ್ಲಿ ನೀರ ಹನಿಗಳು ಮತ್ತು ಆಲಿಕಲ್ಲುಗಳು ನಿರ್ಮಾಣವಾಗಿ ಅವು ದೊಡ್ಡದಾಗುತ್ತಾ ಬೆಳೆಯತೊಡಗುತ್ತವೆ. ಈ ನೀರ ಹನಿಗಳು ಮತ್ತು ಆಲಿಕಲ್ಲುಗಳು ತುಂಬಾ ಭಾರವಾಗಿ, ಮೇಲೇರುವ ಒತ್ತಡದ ಗಾಳಿಗೆ ಅವುಗಳನ್ನು ಎತ್ತಿಹಿಡಿಯಲು ಸಾಧ್ಯವಾಗದಾದಾಗ ಅವು ಮೋಡದಿಂದ ಮಳೆ ಮತ್ತು ಆಲಿಕಲ್ಲುಗಳಾಗಿ ಸುರಿಯತೊಡಗುತ್ತವೆ.[2]




**ಚಿತ್ರ 20**. ರಾಶಿಜಲಮೇಘ. ಮೋಡಗಳು ಮೇಲ್ಮುಖವಾಗಿ ಪೇರಿಸಲ್ಪಡುವಾಗ, ಅದರಿಂದ ಮಳೆ ನೀರು ಹೊರಬರುತ್ತದೆ. [*Weather and Climate*, Bodin, p.123.]



ದೇವನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

> ﴿**ಅಲ್ಲಾಹು ಮೋಡಗಳನ್ನು ದೂಡುವುದನ್ನು, ತರುವಾಯ ಅವುಗಳನ್ನು ಒಟ್ಟು ಸೇರಿಸುವುದನ್ನು, ತರುವಾಯ ಅದನ್ನು ಒಂದರ ಮೇಲೊಂದರಂತೆ ಪದರ ಪದರಗಳಾಗಿ ಪೇರಿಸುವುದನ್ನು ತಾವು ಕಾಣುವುದಿಲ್ಲವೇ? ಆಗ ಅದರ ನಡುವಿನಿಂದ ಮಳೆನೀರು ಹೊರ ಬರುವುದಾಗಿ ತಾವು ಕಾಣುವಿರಿ....**﴾ (ಕುರ್‌ಆನ್ 24:43)

ಗಾಳಿ ಮತ್ತು ಅದರ ದಿಕ್ಕನ್ನು ಅಧ್ಯಯನ ಮಾಡಲು, ಆರ್ದ್ರತೆ ಮತ್ತು ಅದರ ಏರಿಳಿತಗಳನ್ನು ಅಳೆಯಲು, ವಾಯುಮಂಡಲದ ಒತ್ತಡದ ಮಟ್ಟವನ್ನು ಮತ್ತು ವ್ಯತ್ಯಾಸಗಳನ್ನು ನಿರ್ಧರಿಸಲು

---

1. ಮೇಲೇರುವ ಒತ್ತಡದ ಗಾಳಿಯು ಮಧ್ಯಭಾಗದಲ್ಲಿ ಬಲವಾಗಿರಲು ಕಾರಣವೇನೆಂದರೆ ಅವು ಮೋಡದ ಹೊರಭಾಗದ ತಣಿಸುವ ಪ್ರಕ್ರಿಯೆಯಿಂದ ಸಂರಕ್ಷಿಸಲ್ಪಟ್ಟಿರುತ್ತದೆ.
2. ನೋಡಿ: *The Atmosphere*, Anthes and others, p. 269, ಮತ್ತು *Elements of Meteorology*, Miller and Thompson, pp. 141-142.



**ಚಿತ್ರ 21**. ರಾಶಿಜಲಮೇಘ [*A Colour Guide to Clouds*, Scorer and Wexler, p. 23.]

ಆಧುನಿಕ ಉಪಕರಣಗಳಾದ ವಿಮಾನಗಳು, ಉಪಗ್ರಹಗಳು, ಕಂಪ್ಯೂಟರ್‌ಗಳು, ಬೆಲೂನ್‌ಗಳು ಇತ್ಯಾದಿಗಳನ್ನು ಬಳಸುವ ಮೂಲಕ ಪವನಶಾಸ್ತ್ರಜ್ಞರು ತೀರಾ ಇತ್ತೀಚೆಗೆ ಮೋಡ ನಿರ್ಮಾಣ ಮತ್ತು ಅದರ ಕಾರ್ಯವೈಖರಿಗಳ ಬಗ್ಗೆ ಅರಿತಿದ್ದಾರೆ.(1)

ಮೇಲೆ ಉಲ್ಲೇಖಿಸಲಾದ ಸೂಕ್ತಿಯು ಮೋಡ ಮತ್ತು ಮಳೆಯ ಬಗ್ಗೆ ಮಾತನಾಡಿದ ಬಳಿಕ ಆಲಿಕಲ್ಲು ಮತ್ತು ಮಿಂಚಿನ ಬಗ್ಗೆ ಮಾತನಾಡುತ್ತದೆ:

> **﴾....ಆಕಾಶದಿಂದ –ಅಲ್ಲಿರುವ ಪರ್ವತಗಳಂತಹ ಮೋಡಗಳ ರಾಶಿಗಳಿಂದ– ಅವನು ಆಲಿಕಲ್ಲುಗಳನ್ನು ಇಳಿಸುವನು. ತರುವಾಯ ಅವನಿಚ್ಛಿಸಿದವರ ಮೇಲೆ ಅವನು ಅದನ್ನು ತಗುಲಿಸುವನು. ಅವನಿಚ್ಛಿಸಿದವರಿಂದ ಅದನ್ನು ತಿರುಗಿಸಿ ಬಿಡುವನು. ಅದರ ಮಿಂಚು ದೃಷ್ಟಿಗಳನ್ನು ಕೀಳುವಂತಿರುವುದು.﴿**
> (ಕುರ್‌ಆನ್ 24:43)

ಆಲಿಕಲ್ಲುಗಳನ್ನು ಸುರಿಸುವ ಈ ರಾಶಿಜಲಮೇಘಗಳು ಪರ್ವತಗಳಂತೆ ಸುಮಾರು 25,000 ದಿಂದ 30,000 ಅಡಿಗಳಷ್ಟು (4.7ರಿಂದ 5.7 ಮೈಲು)(2) ಎತ್ತರಕ್ಕೆ ಬೆಳೆಯುತ್ತದೆಂದು ಪವನಶಾಸ್ತ್ರಜ್ಞರು ಹೇಳುತ್ತಾರೆ. ಆದ್ದರಿಂದಲೇ ಕುರ್‌ಆನ್ ಹೇಳುತ್ತದೆ: **“ಆಕಾಶದಿಂದ –ಅಲ್ಲಿರುವ ಪರ್ವತಗಳಂತಹ ಮೋಡಗಳ ರಾಶಿಗಳಿಂದ– ಅವನು ಆಲಿಕಲ್ಲುಗಳನ್ನು ಇಳಿಸುವನು.”** (ನೋಡಿ ಚಿತ್ರ 21)

1. ನೋಡಿ: *Ee'jaz al-Qur'an al-Kareem fee Wasf Anwa' al-Riyah, al-Sohob, al-Matar*, Makky and others, p. 55.
2. *Elements of Meteorology*, Miller and Thompson, p. 141.

ಇಲ್ಲಿ ಒಂದು ಪ್ರಶ್ನೆ ಉದ್ಭವಿಸುತ್ತದೆ. ಅದೇನೆಂದರೆ ಈ ಸೂಕ್ತಿಯಲ್ಲಿ ಆಲಿಕಲ್ಲುಗಳನ್ನು ಪರಾಮರ್ಶಿಸುತ್ತಾ **'ಅದರ ಮಿಂಚು'** ಎಂದು ಹೇಳಲು ಕಾರಣವೇನು? ಮಿಂಚನ್ನು ಉತ್ಪಾದಿಸುವುದರಲ್ಲಿ ಆಲಿಕಲ್ಲು ಪ್ರಮುಖ ಘಟಕವಾಗಿದೆಯೆಂದು ಇದರ ಅರ್ಥವೇ? 'ಮೀಟಿಯಾರಾಲಜಿ ಟುಡೇ' ಎಂಬ ಗ್ರಂಥವು ಇದರ ಬಗ್ಗೆ ಏನೆನ್ನುತ್ತದೆಂದು ನೋಡೋಣ. ಈ ಗ್ರಂಥವು ಹೇಳುವ ಪ್ರಕಾರ ಅತಿಶೀತಲ ಹನಿಗಳು ಮತ್ತು ಐಸ್ ಸ್ಫಟಿಕಗಳಿಂದ ಕೂಡಿದ ಮೋಡದ ಒಂದು ಭಾಗದ ಮೂಲಕ ಆಲಿಕಲ್ಲು ಬೀಳುವಾಗ ಆ ಮೋಡವು ವಿದ್ಯುದೀಕರಣಗೊಳ್ಳುತ್ತದೆ. ದ್ರವ ಹನಿಗಳು ಆಲಿಕಲ್ಲಿಗೆ ಢಿಕ್ಕಿ ಹೊಡೆಯುವಾಗಲೆಲ್ಲಾ, ಅವು ಹೆಪ್ಪುಗಟ್ಟಿ ಸುಪ್ತ ಶಾಖವನ್ನು ಬಿಡುಗಡೆ ಮಾಡುತ್ತವೆ. ಇದು ಆಲಿಕಲ್ಲಿನ ಹೊರಮೈಯನ್ನು ಸುತ್ತುಮುತ್ತಲಿನ ಐಸ್ ಸ್ಫಟಿಕಗಳಿಗಿಂತ ಬೆಚ್ಚಗಿಡುತ್ತದೆ. ಆಲಿಕಲ್ಲು ಐಸ್ ಸ್ಫಟಿಕದೊಂದಿಗೆ ಸಂಧಿಸುವಾಗ ಪ್ರಮುಖ ವಿದ್ಯಮಾನವೊಂದು ಜರುಗುತ್ತದೆ: ಇಲೆಕ್ಟ್ರಾನ್‌ಗಳು ತಣ್ಣಗಿನ ವಸ್ತುವಿನಿಂದ ಬೆಚ್ಚಗಿನ ವಸ್ತುವಿನೆಡೆಗೆ ಹರಿಯುತ್ತವೆ. ಇದರಿಂದಾಗಿ ಆಲಿಕಲ್ಲುಗಳು ಋಣಾತ್ಮಕವಾಗಿ ವಿದ್ಯುತ್ ಪೂರಿತವಾಗುತ್ತದೆ (negatively charged). ಅತಿಶೀತಲ ಹನಿಗಳು ಆಲಿಕಲ್ಲನ್ನು ಸಂಧಿಸುವಾಗಲೂ ಮತ್ತು ಧನಾತ್ಮಕವಾಗಿ ವಿದ್ಯುತ್ ಪೂರಿತವಾಗಿರುವ ಮಂಜುಗಡ್ಡೆಯ ಚೂರುಗಳು ಒಡೆಯುವಾಗಲೂ ಇದೇ ಪ್ರಕ್ರಿಯೆ ಜರುಗುತ್ತದೆ. ಈ ಹಗುರವಾಗಿರುವ ಧನಾತ್ಮಕವಾಗಿ ವಿದ್ಯುತ್ ಪೂರಿತವಾಗಿರುವ ಕಣಗಳು ಮೇಲೇರುವ ಒತ್ತಡದ ಗಾಳಿಯಿಂದಾಗಿ ಮೋಡದ ಮೇಲ್ಭಾಗಕ್ಕೆ ವಹಿಸಲ್ಪಡುತ್ತವೆ. ಋಣಾತ್ಮಕವಾಗಿ ವಿದ್ಯುತ್ ಪೂರಿತವಾಗಿರುವ ಆಲಿಕಲ್ಲು ಮೋಡದ ಕೆಳಭಾಗಕ್ಕೆ ಬೀಳುವ ಮೂಲಕ ಮೋಡದ ಕೆಳಭಾಗವು ಋಣಾತ್ಮಕವಾಗಿ ವಿದ್ಯುತ್ ಪೂರಿತವಾಗುತ್ತದೆ. ಈ ಋಣಾತ್ಮಕ ವಿದ್ಯುತ್ ತರುವಾಯ ಮಿಂಚಿನ ರೂಪದಲ್ಲಿ ವಿಸರ್ಜನೆಯಾಗುತ್ತದೆ.[1] ಮಿಂಚನ್ನು ಉತ್ಪಾದಿಸುವುದರಲ್ಲಿ ಆಲಿಕಲ್ಲು ಪ್ರಮುಖ ಘಟಕವಾಗಿದೆಯೆಂದು ಇದರಿಂದ ತಿಳಿದುಬರುತ್ತದೆ.



ಮಿಂಚಿನ ಬಗ್ಗೆಯಿರುವ ಈ ಮಾಹಿತಿಯು ತೀರಾ ಇತ್ತೀಚೆಗೆ ಸಂಶೋಧಿಸಿದ್ದಾಗಿದೆ. ಕ್ರಿ.ಶ. 1600ರ ತನಕ ಪವನಶಾಸ್ತ್ರದ ಬಗ್ಗೆ ಅರಿಸ್ಟಾಟಲ್‌ನ ಚಿಂತನೆಗಳೇ ಪ್ರಚಲಿತದಲ್ಲಿದ್ದವು. ಉದಾಹರಣೆಗೆ: ಅರಿಸ್ಟಾಟಲ್ ಹೇಳುವ ಪ್ರಕಾರ ವಾಯುಮಂಡಲವು, ತೇವಾಂಶವಿರುವ ಮತ್ತು ಒಣಗಿರುವ ಎಂಬ ಎರಡು ವಿಧಗಳ ಆವಿಯನ್ನು ಹೊಂದಿದೆ. ಆತ ಹೇಳುವ ಪ್ರಕಾರ ಗುಡುಗು ಎಂದರೆ ಅದು ಒಣ ಆವಿಯು ಸುತ್ತುಮುತ್ತಲಿನ ಮೋಡಗಳೊಂದಿಗೆ ಢಿಕ್ಕಿ ಹೊಡೆಯುವಾಗ

1. *Meteorology Today*, Ahrens, p. 437.

ಉಂಟಾಗುವ ಶಬ್ದವಾಗಿದೆ. ಹಾಗೆಯೇ ಮಿಂಚು ಎಂದರೆ ಅದು ಒಣ ಆವಿಯು ತೆಳ್ಳಗಿನ ಮತ್ತು ಬಲಹೀನ ಬೆಂಕಿಯಾಗಿ ಉರಿಯುವುದಾಗಿದೆ.[1] ಇವು ಹದಿನಾಲ್ಕು ಶತಮಾನಗಳ ಹಿಂದೆ ಕುರ್‌ಆನ್ ಅವತೀರ್ಣಗೊಳ್ಳುವ ಕಾಲದಲ್ಲಿ ಪ್ರಚಲಿತದಲ್ಲಿದ್ದ ಪವನಶಾಸ್ತ್ರದ ಕೆಲವು ವಿಚಾರಗಳಾಗಿದ್ದವು.

## ಏ) ಪವಿತ್ರ ಕುರ್‌ಆನ್‌ನಲ್ಲಿರುವ ವೈಜ್ಞಾನಿಕ ಪವಾಡಗಳ ಬಗ್ಗೆ ವಿಜ್ಞಾನಿಗಳ ಅಭಿಪ್ರಾಯಗಳು

ಪವಿತ್ರ ಕುರ್‌ಆನ್‌ನಲ್ಲಿರುವ ವೈಜ್ಞಾನಿಕ ಪವಾಡಗಳ ಬಗ್ಗೆ ವಿಜ್ಞಾನಿಗಳ ಅಭಿಪ್ರಾಯಗಳನ್ನು ಇಲ್ಲಿ ನೀಡಲಾಗಿದೆ. ಈ ಎಲ್ಲ ಅಭಿಪ್ರಾಯಗಳನ್ನೂ ದಿಸ್ ಈಸ್ ದ ಟ್ರೂತ್ ಎಂಬ ವೀಡಿಯೋ ಟೇಪ್‌ನಿಂದ ತೆಗೆಯಲಾಗಿದೆ. ಈ ವೀಡಿಯೋ ಟೇಪ್‌ನಲ್ಲಿ ವಿಜ್ಞಾನಿಗಳು ಈ ಅಭಿಪ್ರಾಯಗಳನ್ನು ಹೇಳುವುದನ್ನು ನೇರವಾಗಿ ನೋಡಬಹುದು ಮತ್ತು ಕೇಳಬಹುದು. (ಈ ವೀಡಿಯೋ ಟೇಪ್‌ಗಾಗಿ ದಯವಿಟ್ಟು ಸಂದರ್ಶಿಸಿರಿ: *http://www.islam-guide.com/truth.htm*).

**1) ಡಾ। ಟಿ. ವಿ. ಎನ್. ಪೆರ್ಸಾಡ್:** ಇವರು ಕೆನಡಾದ ಮಾನಿಟೋಬಾ ವಿಶ್ವವಿದ್ಯಾಲಯದಲ್ಲಿ ಅಂಗರಚನಾಶಾಸ್ತ್ರ, ಶಿಶುವೈದ್ಯಶಾಸ್ತ್ರ ಮತ್ತು ಮಕ್ಕಳ ಆರೋಗ್ಯಶಾಸ್ತ್ರ ಹಾಗೂ ಪ್ರಸೂತಿ, ಸ್ತ್ರೀ–ರೋಗ ಮತ್ತು ಸಂತಾನೋತ್ಪತ್ತಿಶಾಸ್ತ್ರದ ಪ್ರಾಧ್ಯಾಪಕರು. ಸತತ 16 ವರ್ಷಗಳ ಕಾಲ ಅಲ್ಲಿ ಅಂಗರಚನಾಶಾಸ್ತ್ರ ವಿಭಾಗದ ಅಧ್ಯಕ್ಷರಾಗಿದ್ದರು. ಈ ಕ್ಷೇತ್ರದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆದಿರುವರು. 22 ಪಠ್ಯಪುಸ್ತಕಗಳನ್ನು ಮತ್ತು 181ಕ್ಕಿಂತಲೂ ಅಧಿಕ ವೈಜ್ಞಾನಿಕ ಲೇಖನಗಳನ್ನು ಬರೆದಿರುವರು. ಕೆನಡಾದ ಅಂಗರಚನಾಶಾಸ್ತ್ರಜ್ಞರ ಸಂಘಟನೆಯು ಅಂಗರಚನಾಶಾಸ್ತ್ರ ಕ್ಷೇತ್ರಕ್ಕೆ ಸಲ್ಲಿಸಿದ ಸೇವೆಗಾಗಿ ನೀಡುವ ಪ್ರತಿಷ್ಠಿತ ಜೆ.ಸಿ.ಬಿ. ಗ್ರಾಂಟ್ ಪ್ರಶಸ್ತಿಯನ್ನು 1991ರಲ್ಲಿ ಪಡೆದಿರುವರು. ಕುರ್‌ಆನಿನಲ್ಲಿರುವ ವೈಜ್ಞಾನಿಕ ಪವಾಡಗಳ ಬಗ್ಗೆ ಕೇಳಲಾದಾಗ ಅವರು ನೀಡಿದ ಉತ್ತರವು ಹೀಗಿತ್ತು:

**“**ನನಗೆ ವಿವರಿಸಿಕೊಡಲಾಗಿರುವ ಪ್ರಕಾರ ಮುಹಮ್ಮದ್ ಓರ್ವ ಸಾಮಾನ್ಯ ಮನುಷ್ಯರಾಗಿದ್ದರು. ಅವರಿಗೆ ಓದು ಬರಹ ಗೊತ್ತಿರಲಿಲ್ಲ. ವಾಸ್ತವಿಕವಾಗಿ, ಅವರೊಬ್ಬ ಅನಕ್ಷರಸ್ಥರಾಗಿದ್ದರು. ನಾವು ಹನ್ನೆರಡು (ವಾಸ್ತವಿಕವಾಗಿ ಹದಿನಾಲ್ಕು) ಶತಮಾನಗಳ ಹಿಂದಿನ ಕಾಲದ ಬಗ್ಗೆ ಮಾತನಾಡುತ್ತಿದ್ದೇವೆ. ಒಬ್ಬರು ಅನಕ್ಷರಸ್ಥರಾಗಿದ್ದುಕೊಂಡು (ವೈಜ್ಞಾನಿಕ ವಿಷಯಗಳ ಬಗ್ಗೆ) ಗಹನವಾದ ಪ್ರಕಟನೆಗಳನ್ನು ಮತ್ತು ಹೇಳಿಕೆಗಳನ್ನು ನೀಡುತ್ತಿದ್ದಾರೆ. ವೈಜ್ಞಾನಿಕ ಪ್ರಕೃತಿಯ ಬಗ್ಗೆ ಅವೆಲ್ಲವೂ ಅದ್ಭುತಕರವಾದ ರೀತಿಯಲ್ಲಿ ಅತ್ಯಂತ ಕರಾರುವಾಕ್ಕಾಗಿವೆ. ಇವೆಲ್ಲವೂ ಕೇವಲ ಆಕಸ್ಮಿಕಗಳಾಗುವುದು ಹೇಗೆ ಎಂಬುದಕ್ಕೆ ವೈಯುಕ್ತಿಕವಾಗಿ ಯಾವುದೇ ಸಮರ್ಥನೆಯನ್ನೂ ನಾನು ಕಾಣುತ್ತಿಲ್ಲ. ಇಲ್ಲಿ ಅನೇಕ ನಿಖರತೆಗಳಿದ್ದು ಈ ಹೇಳಿಕೆಗಳನ್ನು ನೀಡಲು ಅವರಿಗೆ (ಮುಹಮ್ಮದ್‌ರಿಗೆ) ಮಾರ್ಗದರ್ಶನ ನೀಡಿದ್ದು ದೈವಿಕ ಪ್ರೇರಣೆ ಅಥವಾ ಅವತೀರ್ಣಗಳಾಗಿವೆ ಎಂದು ಅರ್ಥಮಾಡಿಕೊಳ್ಳಲು ಡಾ। ಮೂರ್‌ರಂತೆ ನನಗೂ ಕೂಡ ಯಾವುದೇ ಪ್ರಯಾಸವಿಲ್ಲ.**”**

ಡಾ। ಪೆರ್ಸಾಡ್‌ರವರು ತಮ್ಮ ಕೆಲವು ಗ್ರಂಥಗಳಲ್ಲಿ ಕೆಲವು ಕುರ್‌ಆನ್ ಸೂಕ್ತಿಗಳನ್ನು ಮತ್ತು

1. *The Works of Aristotle Translated into English: Meteorologica*, vol. 3, Ross and others, pp. 369a-369b.

ಪ್ರವಾದಿವಚನಗಳನ್ನು ಸೇರಿಸಿದ್ದಾರೆ. ಅವರು ಅನೇಕ ಸಮ್ಮೇಳನಗಳಲ್ಲಿ ಕೂಡ ಈ ಸೂಕ್ತಿಗಳನ್ನು ಮತ್ತು ಪ್ರವಾದಿವಚನಗಳನ್ನು ಉದ್ಧರಿಸಿದ್ದಾರೆ.

**2) ಡಾ। ಜೋ ಲೈ ಸಿಂಪ್ಸನ್:** ಇವರು ಅಮೇರಿಕಾದ ಟೆಕ್ಸಾಸ್‌ನ ಹ್ಯೂಸ್ಟನ್‌ನಲ್ಲಿರುವ ಬಾಯ್ಲರ್ ಕಾಲೇಜ್ ಆಫ್ ಮೆಡಿಸಿನ್‌ನಲ್ಲಿ ಪ್ರಸೂತಿ ಮತ್ತು ಸ್ತ್ರೀರೋಗ ವಿಭಾಗದ ಅಧ್ಯಕ್ಷರು. ಪ್ರಸೂತಿ ಮತ್ತು ಸ್ತ್ರೀರೋಗಶಾಸ್ತ್ರದ ಪ್ರಾಧ್ಯಾಪಕರು ಮತ್ತು ಆಣ್ವಿಕ ಮತ್ತು ವಂಶಶಾಸ್ತ್ರದ ಪ್ರಾಧ್ಯಾಪಕರು. ಇದಕ್ಕಿಂತ ಮೊದಲು ಇವರು ಮೆಂಫಿಸ್‌ನಲ್ಲಿರುವ ಟೆನ್ನೀಸೀ ವಿಶ್ವವಿದ್ಯಾಲಯದಲ್ಲಿ ಪ್ರಸೂತಿ ಮತ್ತು ಸ್ತ್ರೀರೋಗಶಾಸ್ತ್ರ ವಿಭಾಗದ ಅಧ್ಯಕ್ಷರೂ, ಪ್ರಾಧ್ಯಾಪಕರೂ ಆಗಿದ್ದರು. ಇವರು ಅಮೇರಿಕನ್ ಫರ್ಟಿಲಿಟಿ ಸೊಸೈಟಿಯ ಅಧ್ಯಕ್ಷರೂ ಆಗಿದ್ದರು. ಅಸೋಸಿಯೇಶನ್ ಆಫ್ ಪ್ರೊಫೆಸ್ಸರ್ಸ್ ಆಫ್ ಒಬ್ಸ್‌ಟೆಟ್ರಿಕ್ಸ್ & ಜೈನಕಾಲಜಿ ಪಬ್ಲಿಕ್ ರೆಕಗ್ನಿಶನ್ ಅವಾರ್ಡ್ ಸಹಿತ ಅನೇಕ ಪ್ರಶಸ್ತಿಗಳನ್ನು ಪಡೆದಿದ್ದಾರೆ. ಪ್ರೊ। ಸಿಂಪ್ಸನ್‌ರವರು ಪ್ರವಾದಿ ಮುಹಮ್ಮದ್(ﷺ)ರ ಈ ಕೆಳಗಿನ ಎರಡು ವಚನಗಳನ್ನು ಆಳವಾಗಿ ಅಭ್ಯಾಸ ಮಾಡಿದರು:

**{ನಿಮ್ಮ ಪೈಕಿ ಪ್ರತಿಯೊಬ್ಬರ ಸೃಷ್ಟಿಯನ್ನು 40 ದಿನಗಳಲ್ಲಿ ತಾಯಿಯ ಗರ್ಭಾಶಯದೊಳಗೆ ಜೋಡಿಸಲಾಗುತ್ತದೆ.}**[1]

**{ಭ್ರೂಣಕ್ಕೆ 42 ದಿನಗಳಾಗುವಾಗ ಅಲ್ಲಾಹು ಒಬ್ಬ ಮಲಕನ್ನು ಕಳುಹಿಸಿ, ಆ ಭ್ರೂಣಕ್ಕೆ ಶ್ರವಣ, ದೃಷ್ಟಿ, ಚರ್ಮ, ಮಾಂಸ ಮತ್ತು ಮೂಳೆಗಳನ್ನು ರಚಿಸಿ ರೂಪ ನೀಡುವನು.}**[2]

ಡಾ। ಸಿಂಪ್ಸನ್ ಈ ಎರಡು ಹದೀಸ್‌ಗಳನ್ನು ಆಳವಾಗಿ ಅಧ್ಯಯನ ಮಾಡಿದರು. ಭ್ರೂಣದ ಬೆಳವಣಿಗೆಯ ಹಂತಗಳಲ್ಲಿ ಮೊದಲ 40 ದಿನಗಳು ಅತ್ಯಂತ ಸ್ಪಷ್ಟವಾಗಿ ಗುರುತಿಸಬಹುದಾದ ಹಂತವನ್ನು ಒಳಗೊಂಡಿದೆಯೆಂಬುದನ್ನು ಅರಿತುಕೊಂಡರು. ಪ್ರವಾದಿ(ﷺ)ರು ಇದನ್ನು 40 ದಿನಗಳೆಂದು ಅತ್ಯಂತ ನಿಖರವಾಗಿ ಮತ್ತು ಕರಾರುವಾಕ್ಕಾಗಿ ಹೇಳಿರುವುದು ಅವರನ್ನು ಅಚ್ಚರಿಪಡಿಸಿತ್ತು. ತರುವಾಯ ಸಮ್ಮೇಳನವೊಂದರಲ್ಲಿ ಅವರು ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದರು:

"ಇಲ್ಲಿ ಸೂಚಿಸಲಾದ ಈ ಎರಡು ಹದೀಸ್‌ಗಳು ನಲ್ವತ್ತು ದಿನಗಳೊಳಗಿನ ಭ್ರೂಣ ಬೆಳವಣಿಗೆಯ ಮುಖ್ಯ ಹಂತದ ನಿಶ್ಚಿತ ಸಮಯ ಪಟ್ಟಿಯನ್ನು ನಮಗೆ ಒದಗಿಸುತ್ತದೆ. ಇಂದು ಬೆಳಿಗ್ಗೆ ಇತರ ಭಾಷಣಕಾರರು ಪುನರಾವರ್ತಿಸಿ ಹೇಳಿದಂತೆ ಈ ಹದೀಸ್‌ಗಳು ಅವುಗಳನ್ನು ಬರೆಯಲಾದ ಕಾಲದಲ್ಲಿದ್ದ ವೈಜ್ಞಾನಿಕ ಜ್ಞಾನದ ತಳಹದಿಯಲ್ಲಿ ಬರೆದದ್ದಾಗಿರಲಾರದು ಎಂದು ನಾನು ಭಾವಿಸುತ್ತೇನೆ. ...ನಾನು ಭಾವಿಸುವ ಪ್ರಕಾರ ವಂಶಶಾಸ್ತ್ರ ಮತ್ತು ಧರ್ಮದ ನಡುವೆ ಯಾವುದೇ ತಿಕ್ಕಾಟಗಳೂ ಇಲ್ಲ. ಆದರೆ ವಾಸ್ತವಿಕವಾಗಿ, ಕೆಲವು ಸಾಂಪ್ರದಾಯಿಕ ವೈಜ್ಞಾನಿಕ ಸಮೀಪನೆಗಳಿಗೆ ಅವತೀರ್ಣಗಳನ್ನು ಸೇರಿಸುವ ಮೂಲಕ ವಿಜ್ಞಾನಕ್ಕೆ ಮಾರ್ಗದರ್ಶನ ನೀಡಲು ಧರ್ಮಕ್ಕೆ ಸಾಧ್ಯವಿದೆ ಎಂದು ನಾನು ಭಾವಿಸುತ್ತೇನೆ. ಶತಮಾನಗಳ ಬಳಿಕ ಸತ್ಯವೆಂದು ಸಾಬೀತಾದ ಅನೇಕ ಹೇಳಿಕೆಗಳು ಕುರ್‌ಆನಲ್ಲಿವೆ. ಕುರ್‌ಆನ್‌ನಲ್ಲಿರುವ ಜ್ಞಾನವು ದೈವಿಕವಾಗಿದೆಯೆಂಬುದನ್ನು

1. *ಸಹೀಹುಲ್ ಬುಖಾರಿ* #3208 ಮತ್ತು *ಸಹೀಹ್ ಮುಸ್ಲಿಮ್* #2643. ವಿ.ಸೂ.: ಈ ಹೂ ಆವರಣ {...} ಗಳೊಳಗಿರುವುದು ಪ್ರವಾದಿ ಮುಹಮ್ಮದ್(ﷺ)ರು ಹೇಳಿದ ವಚನದ ಭಾಷಾಂತರವಾಗಿದೆ. # ಎಂಬ ಚಿಹ್ನೆಯು ಹದೀಸಿನ ಸಂಖ್ಯೆಯನ್ನು ಸೂಚಿಸುತ್ತದೆ. *ಹದೀಸ್* ಎಂದರೆ ಪ್ರವಾದಿ ಮುಹಮ್ಮದ್(ﷺ)ರ ಮಾತು, ಕೃತಿ ಮತ್ತು ಅಂಗೀಕಾರಗಳಾಗಿವೆ.

2. *ಸಹೀಹ್ ಮುಸ್ಲಿಮ್* #2645

ಇದು ಬೆಂಬಲಿಸುತ್ತದೆ.”

**3) ಡಾ। ಇ. ಮಾರ್ಷಲ್ ಜಾನ್ಸನ್:** ಇವರು ಅಮೇರಿಕಾದ ಫಿಲಾಡೆಲ್ಫಿಯಾದ ಥಾಮಸ್ ಜೆಫರ್ಸನ್ ವಿಶ್ವವಿದ್ಯಾಲಯದ ಅಂಗರಚನಾಶಾಸ್ತ್ರ ಮತ್ತು ವಿಕಾಸಾತ್ಮಕ ಜೀವಶಾಸ್ತ್ರದ ವಿಶ್ರಾಂತ ಪ್ರಾಧ್ಯಾಪಕರು. ಅಲ್ಲಿ ಇವರು 22 ವರ್ಷಗಳ ಕಾಲ ಅಂಗರಚನಾಶಾಸ್ತ್ರದ ಪ್ರಾಧ್ಯಾಪಕರೂ, ಅಂಗರಚನಾಶಾಸ್ತ್ರ ವಿಭಾಗದ ಅಧ್ಯಕ್ಷರೂ ಆಗಿದ್ದರು. ಹಾಗೆಯೇ ಡೇನಿಯಲ್ ಬಾಗ್ ಇನ್ಸ್‌ಟಿಟ್ಯೂಟ್‌ನ ನಿರ್ದೇಶಕರಾಗಿದ್ದರು. ಇವರು ಟೆರಟಾಲಜಿ ಸೊಸೈಟಿಯ ಅಧ್ಯಕ್ಷರೂ ಆಗಿದ್ದರು ಮತ್ತು ಸುಮಾರು 200 ಗ್ರಂಥಗಳನ್ನು ಬರೆದಿರುವರು. 1981ರಲ್ಲಿ ಸೌದಿ ಅರೇಬಿಯಾದ ದಮ್ಮಾಮ್‌ನಲ್ಲಿ ಜರುಗಿದ 7ನೇ ವೈದ್ಯಕೀಯ ಸಮ್ಮೇಳನದಲ್ಲಿ ಡಾ। ಜಾನ್ಸನ್‌ರವರು ತಮ್ಮ ಸಂಶೋಧನಾತ್ಮಕ ಪ್ರಬಂಧದಲ್ಲಿ ಹೇಳಿದರು:

“ಕುರ್‌ಆನ್ ಕೇವಲ ಬಾಹ್ಯ ರಚನೆಯ ಬೆಳವಣಿಗೆಯ ಬಗ್ಗೆ ಮಾತ್ರ ವಿವರಿಸುವುದಿಲ್ಲ. ಬದಲಾಗಿ ಆಂತರಿಕ ಹಂತಗಳು, ಭ್ರೂಣದ ಒಳಗಿನ ಹಂತಗಳು, ಅದರ ಸೃಷ್ಟಿ ಮತ್ತು ಬೆಳವಣಿಗೆ ಮೊದಲಾದವುಗಳ ಬಗ್ಗೆ ಕೂಡ ಒತ್ತಿ ಹೇಳುತ್ತದೆ. ಹಾಗೆಯೇ ಸಮಕಾಲೀನ ವಿಜ್ಞಾನವು ಕಂಡು ಹಿಡಿದ ಪ್ರಮುಖ ಘಟನೆಗಳ ಬಗ್ಗೆ ಕೂಡ ಒತ್ತಿ ಹೇಳುತ್ತದೆ.”

ನಂತರ ಅವರು ಹೇಳುತ್ತಾರೆ: “ಒಬ್ಬ ವಿಜ್ಞಾನಿಯಾಗಿ, ನಾನು ಏನನ್ನು ಕಾಣುವೆನೋ ಅದರೊಂದಿಗೆ ಮಾತ್ರ ನನಗೆ ವ್ಯವಹರಿಸಲು ಸಾಧ್ಯ. ಭ್ರೂಣಶಾಸ್ತ್ರ ಮತ್ತು ವಿಕಾಸಾತ್ಮಕ ಜೀವಶಾಸ್ತ್ರವನ್ನು ನನಗೆ ಅರಿತುಕೊಳ್ಳಲು ಸಾಧ್ಯವಿದೆ. ಕುರ್‌ಆನ್‌ನಿಂದ ನನಗೆ ಭಾಷಾಂತರಿಸಲಾದ ವಚನಗಳನ್ನು ಅರಿತುಕೊಳ್ಳಲು ನನಗೆ ಸಾಧ್ಯವಿದೆ. ನಾನು ಈಗಾಗಲೇ ನೀಡಿದ ಉದಾಹರಣೆಯಂತೆ, ನಾನು ಇಂದು ಏನನ್ನು ಅರಿತಿರುವೆನೋ ಮತ್ತು ಅದನ್ನು ಹೇಗೆ ವಿವರಿಸುತ್ತಿರುವೆನೋ ಅದರೊಂದಿಗೆ ನನ್ನನ್ನು ನಾನೇ ಆ ಕಾಲಕ್ಕೆ (ಏಳನೇ ಶತಮಾನಕ್ಕೆ) ಸ್ಥಳಾಂತರಿಸುವುದಾದರೆ ಈ ವಿಷಯಗಳನ್ನು (ಕುರ್‌ಆನಿನಲ್ಲಿ) ಹೇಗೆ ವಿವರಿಸಲಾಗಿದೆಯೋ ಹಾಗೆ ವಿವರಿಸಲು ನನ್ನಿಂದ ಅಸಾಧ್ಯ. ಮುಹಮ್ಮದ್‌ರು ಈ ಮಾಹಿತಿಗಳನ್ನು ಯಾವುದೋ ಸ್ಥಳದಿಂದ ಪಡೆಯುತ್ತಿದ್ದರು ಎಂಬ ಪರಿಕಲ್ಪನೆಯನ್ನು ನಿಷೇಧಿಸಲು ಯಾವುದೇ ಪುರಾವೆಯನ್ನೂ ನಾನು ಕಾಣುತ್ತಿಲ್ಲ. ಆದ್ದರಿಂದ ಅವರಿಗೆ ಏನನ್ನು ಬರೆಯಲು ಸಾಧ್ಯವಾಯಿತೋ[1] ಅದರಲ್ಲಿ ದೈವಿಕ ಹಸ್ತಕ್ಷೇಪವಿತ್ತು ಎಂಬ ಪರಿಕಲ್ಪನೆಗೆ ವಿರುದ್ಧವಾಗಿ ನಾನು ಏನನ್ನೂ ಇಲ್ಲಿ ಕಾಣುತ್ತಿಲ್ಲ.”

**4) ಡಾ। ವಿಲಿಯಂ ಡಬ್ಲ್ಯೂ. ಹೇ:** ಇವರು ಪ್ರಸಿದ್ಧ ಸಮುದ್ರಶಾಸ್ತ್ರ ವಿಜ್ಞಾನಿ. ಅಮೇರಿಕಾದ ಕೊಲರಾಡೋದಲ್ಲಿರುವ ಕೊಲರಾಡೋ ವಿಶ್ವವಿದ್ಯಾಲಯದಲ್ಲಿ ಭೂಗರ್ಭಶಾಸ್ತ್ರದ ಪ್ರಾಧ್ಯಾಪಕರು. ಇದಕ್ಕಿಂತ ಮುಂಚೆ ಮಿಯಾಮಿಯಲ್ಲಿರುವ ಮಿಯಾಮಿ ವಿಶ್ವವಿದ್ಯಾಲಯದ ರೊಸೆನ್ಸಿಯಲ್ ಸ್ಕೂಲ್ ಆಫ್ ಮೆರೈನ್ & ಅಟ್ಮೋಸ್ಫಿಯರಿಕ್ ಸೈಯನ್ಸ್ ಇದರ ಡೀನ್ ಆಗಿದ್ದರು. ಸಮುದ್ರದ ಬಗ್ಗೆ ಕುರ್‌ಆನಿನಲ್ಲಿ ಪ್ರಸ್ತಾಪಿಸಲಾದ ಕೆಲವು ಸೂಚನೆಗಳ ಬಗ್ಗೆ ಗಮನ ಸೆಳೆದಾಗ ಅವರು ಹೇಳಿದರು:

“ಕುರ್‌ಆನಿನಲ್ಲಿರುವ ಈ ವಿಧದ ಮಾಹಿತಿಯ ಬಗ್ಗೆ ನನಗೆ ಅತ್ಯಾಸಕ್ತಿಯಿದೆ. ಆದರೆ ಈ ಮಾಹಿತಿಗಳು ಎಲ್ಲಿಂದ ಸಿಕ್ಕಿದವು ಎಂಬ ಬಗ್ಗೆ ಅರಿಯಲು ನನಗೆ ಯಾವ ಮಾರ್ಗವೂ

---

1. ಪ್ರವಾದಿ ಮುಹಮ್ಮದ್(ﷺ)ರು ಅನಕ್ಷರಸ್ಥರಾಗಿದ್ದರು. ಅವರಿಗೆ ಓದಲು, ಬರೆಯಲು ಬರುತ್ತಿರಲಿಲ್ಲ. ಅವರು ಅನುಯಾಯಿಗಳಿಗೆ ಕುರ್‌ಆನ್ ಓದಿಕೊಡುತ್ತಿದ್ದರು ಮತ್ತು ಕೆಲವರೊಂದಿಗೆ ಬರೆದಿಡಲು ಹೇಳುತ್ತಿದ್ದರು.

ಇಲ್ಲ. ಆದರೆ ಅವು ಅಲ್ಲಿವೆ ಮತ್ತು ಈ ಸಂಶೋಧನೆಯು ಅದನ್ನು, (ಕುರ್‌ಆನಿನಲ್ಲಿರುವ) ಕೆಲವು ಮಾಹಿತಿಗಳ ಅರ್ಥವನ್ನು ಸಂಶೋಧಿಸುತ್ತಾ ಸಾಗಲಿದೆ ಎಂಬುದು ನನಗೆ ಅತ್ಯಂತ ಆಸಕ್ತಿದಾಯಕವಾಗಿದೆ ಎಂದು ನಾನು ಭಾವಿಸುತ್ತೇನೆ." ಕುರ್‌ಆನ್‌ನ ಮೂಲದ ಬಗ್ಗೆ ಅವರೊಂದಿಗೆ ಕೇಳಲಾದಾಗ ಅವರು ಹೇಳಿದರು: "ಇದು ದೈವಿಕವಾಗಿರಬಹುದೆಂದು ನಾನು ಭಾವಿಸುತ್ತೇನೆ."

**5) ಡಾ| ಜೆರಾಲ್ಡ್ ಸಿ. ಜಾರಿಂಜರ್:** ಇವರು ಅಮೇರಿಕಾದ ವಾಷಿಂಗ್ಟನ್‌ನಲ್ಲಿರುವ ಜಾರ್ಜ್ ಟೌನ್ ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಮೆಡಿಸಿನ್‌ನ ಕೋಶ ಜೀವಶಾಸ್ತ್ರ ವಿಭಾಗದ ವೈದ್ಯಕೀಯ ಭ್ರೂಣಶಾಸ್ತ್ರದ ಸಹಾಯಕ ಪ್ರಾಧ್ಯಾಪಕರು. ಸೌದಿ ಅರೇಬಿಯಾದ ರಿಯಾದ್‌ನಲ್ಲಿ ಜರುಗಿದ 8ನೇ ವೈದ್ಯಕೀಯ ಸಮ್ಮೇಳನದಲ್ಲಿ ತಮ್ಮ ಸಂಶೋಧನಾ ಪ್ರಬಂಧವನ್ನು ಮಂಡಿಸುತ್ತಾ ಇವರು ಹೇಳಿದರು:

"ಕುರ್‌ಆನಿನ ಕೆಲವು ಸೂಕ್ತಿಗಳು ಅಂಗೋತ್ಪಾದನೆಯ ಮೂಲಕ ರೇತ್ರಾಣುಗಳ ಸಮ್ಮಿಶ್ರಣದ ಸಮಯದಿಂದ ತೊಡಗಿ ಮನುಷ್ಯ ಬೆಳವಣಿಗೆಯ ವಿವರಣೆಯನ್ನು ಅತ್ಯಂತ ಸಮಗ್ರವಾಗಿ ಒಳಗೊಂಡಿವೆ. ವಿಭಾಗೀಕರಣ, ಪಾರಿಭಾಷಿಕ ಪದಗಳ ಬಳಕೆ ಮತ್ತು ವಿವರಣೆ ಮೊದಲಾದ ಮನುಷ್ಯ ಬೆಳವಣಿಗೆಯ ಸ್ಪಷ್ಟ ಮತ್ತು ಸಂಪೂರ್ಣ ದಾಖಲೆಯು ಈ ಹಿಂದೆ ಅಸ್ತಿತ್ವದಲ್ಲಿರಲಿಲ್ಲ. ಎಲ್ಲದರಲ್ಲಿ ಅಲ್ಲದಿದ್ದರೂ ಹೆಚ್ಚಿನ ಸಂದರ್ಭಗಳಲ್ಲಿ ಈ ವಿವರಣೆಯು ಸಾಂಪ್ರದಾಯಿಕ ವೈಜ್ಞಾನಿಕ ಸಾಹಿತ್ಯದಲ್ಲಿ ಭ್ರೂಣ ಮತ್ತು ಭ್ರೂಣ ಬೆಳವಣಿಗೆಯ ವಿವಿಧ ಹಂತಗಳ ಬಗ್ಗೆ ದಾಖಲಾಗಿರುವ ಮಾಹಿತಿಗಳನ್ನು ಅನೇಕ ಶತಮಾನಗಳಷ್ಟು ಹಿಂದಕ್ಕೆ ತಳ್ಳುತ್ತದೆ."

**6) ಡಾ| ಯೋಶಿಹಿಡೆ ಕೋಝೂಯಿ:** ಇವರು ಜಪಾನಿನ ಟೋಕಿಯೋದಲ್ಲಿರುವ ಟೋಕಿಯೋ ವಿಶ್ವವಿದ್ಯಾಲಯದ ವಿಶ್ರಾಂತ ಪ್ರಾಧ್ಯಾಪಕರು ಮತ್ತು ಟೋಕಿಯೋದಲ್ಲಿರುವ ನ್ಯಾಶನಲ್ ಆಸ್ಟ್ರೋನಾಮಿಕಲ್ ಒಬ್ಸರ್‌ವೇಟರಿಯ ನಿರ್ದೇಶಕರು. ಅವರು ಹೇಳಿದರು:

"ಕುರ್‌ಆನಿನಲ್ಲಿರುವ ನೈಜ ಖಗೋಳಶಾಸ್ತ್ರೀಯ ವಾಸ್ತವಿಕತೆಗಳನ್ನು ಕಂಡು ನಾನು ಅತ್ಯಂತ ಪ್ರಭಾವಿತನಾಗಿದ್ದೇನೆ. ಆಧುನಿಕ ಖಗೋಳಶಾಸ್ತ್ರಜ್ಞರಾದ ನಾವು ವಿಶ್ವದ ಬಗ್ಗೆ ಸ್ವಲ್ಪ ಮಾತ್ರ ಅಧ್ಯಯನ ಮಾಡಿರುವೆವು. ಒಂದು ಚಿಕ್ಕ ಭಾಗವನ್ನು ಕಲಿಯುವತ್ತ ಮಾತ್ರ ನಾವು ನಮ್ಮ ಶ್ರಮಗಳನ್ನು ಕೇಂದ್ರೀಕರಿಸಿರುವೆವು. ಯಾಕೆಂದರೆ ದೂರದರ್ಶಕಗಳ ಮೂಲಕ ನಮಗೆ ಆಕಾಶದ ಕೆಲವು ಭಾಗಗಳನ್ನು ಮಾತ್ರ ನೋಡಲು ಸಾಧ್ಯ. ಸಂಪೂರ್ಣ ವಿಶ್ವದ ಬಗ್ಗೆ ನಾವು ಚಿಂತಿಸಿಯೇ ಇಲ್ಲ. ಆದ್ದರಿಂದ ಕುರ್‌ಆನ್ ಓದುವ ಮೂಲಕ ಮತ್ತು ಪ್ರಶ್ನೆಗಳಿಗೆ ಉತ್ತರಿಸುವ ಮೂಲಕ ವಿಶ್ವವನ್ನು ಸಂಶೋಧನೆ ಮಾಡುವ ಮುಂದಿನ ದಾರಿಯನ್ನು ಕಾಣಲು ನನಗೆ ಸಾಧ್ಯವಾಗಬಹುದೆಂದು ನಾನು ಭಾವಿಸುತ್ತೇನೆ."

**7) ಪ್ರೊ| ತೇಜಾತೆತ್ ತೇಜಾಸೆನ್:** ಇವರು ಥಾಯ್ಲೆಂಡ್‌ನ ಚಿಯಾಂಗ್ ಮಾಯಿಯಲ್ಲಿರುವ ಚಿಯಾಂಗ್ ಮಾಯಿ ವಿಶ್ವವಿದ್ಯಾಲಯದಲ್ಲಿ ಅಂಗರಚನಾಶಾಸ್ತ್ರ ವಿಭಾಗದ ಅಧ್ಯಕ್ಷರು. ಈ ಹಿಂದೆ ಇದೇ ವಿಶ್ವವಿದ್ಯಾಲಯದಲ್ಲಿ ಇವರು ಫಾಕ್ಯುಲ್ಟಿ ಆಫ್ ಮೆಡಿಸಿನ್ ವಿಭಾಗದಲ್ಲಿ ಡೀನ್ ಆಗಿದ್ದರು. ಸೌದಿ ಅರೇಬಿಯಾದ ರಿಯಾದ್‌ನಲ್ಲಿ ಜರುಗಿದ 8ನೇ ವೈದ್ಯಕೀಯ ಸಮ್ಮೇಳನದಲ್ಲಿ ಇವರು ಹೇಳಿದರು:

"ಕಳೆದ ಮೂರು ವರ್ಷಗಳಿಂದ ನನಗೆ ಕುರ್‌ಆನ್‌ನ ಬಗ್ಗೆ ಆಸಕ್ತಿ ಮೂಡಿತು.... ನನ್ನ

ಅಧ್ಯಯನದಿಂದ ಮತ್ತು ಈ ಸಮ್ಮೇಳನದಿಂದ ನಾನು ಕಲಿತುಕೊಂಡಿರುವ ಪ್ರಕಾರ ಹದಿನಾಲ್ಕು ಶತಮಾನಗಳ ಹಿಂದೆ ಕುರ್‌ಆನ್‌ನಲ್ಲಿ ದಾಖಲಾಗಿರುವ ಎಲ್ಲ ವಿಷಯಗಳೂ ವೈಜ್ಞಾನಿಕ ಸಂಪನ್ಮೂಲಗಳ ಮೂಲಕ ರುಜುವಾತು ಪಡಿಸಬಹುದಾದಂತಹ ಸತ್ಯವಾಗಿರಲೇಬೇಕು. ಮುಹಮ್ಮದ್‌ರಿಗೆ ಓದುಬರಹ ತಿಳಿದಿಲ್ಲವಾದ್ದರಿಂದ, ಸೃಷ್ಟಿಕರ್ತನಾಗಲು ಅರ್ಹತೆಯಿರುವ ಒಬ್ಬನು ಜ್ಞಾನೋದಯದ ಮೂಲಕ ತನಗೆ ಅವತೀರ್ಣಗೊಳಿಸಿಕೊಟ್ಟ ಈ ಸತ್ಯವನ್ನು ಪ್ರಸರಿಸಿದ ಸಂದೇಶವಾಹಕರಾಗಿರಲೇಬೇಕು. ಈ ಸೃಷ್ಟಿಕರ್ತನು ದೇವನಾಗಿರಲೇಬೇಕು. ಆದ್ದರಿಂದ ಲಾಇಲಾಹ ಇಲ್ಲಲ್ಲಾಹ್, ಅಲ್ಲಾಹನ ಹೊರತು ಆರಾಧಿಸಲರ್ಹರಾಗಿ ಯಾರೂ ಇಲ್ಲ ಮತ್ತು ಮುಹಮ್ಮದುರ್ರಸೂಲುಲ್ಲಾಹ್, ಮುಹಮ್ಮದ್‌ರು ಅಲ್ಲಾಹನ ಸಂದೇಶವಾಹಕರಾಗಿದ್ದಾರೆ ಎಂದು ಘೋಷಿಸಲು ಇದು ಸೂಕ್ತ ಸಮಯವಾಗಿದೆಯೆಂದು ನಾನು ಭಾವಿಸುತ್ತೇನೆ. ಕೊನೆಯದಾಗಿ, ಈ ಸಮ್ಮೇಳನವನ್ನು ಅತ್ಯುತ್ತಮವಾಗಿ ಮತ್ತು ಅತ್ಯಂತ ಯಶಸ್ವಿಯಾಗಿ ವ್ಯವಸ್ಥೆಗೊಳಿಸಿರುವುದಕ್ಕಾಗಿ ನಾನು ಕೃತಜ್ಞತೆ ಸಲ್ಲಿಸಲೇಬೇಕಾಗಿದೆ. ನಾನು ಇಲ್ಲಿ ವೈಜ್ಞಾನಿಕ ದೃಷ್ಟಿಕೋನ ಮತ್ತು ಧಾರ್ಮಿಕ ದೃಷ್ಟಿಕೋನದ ಲಾಭವನ್ನು ಪಡೆಯುವುದರ ಜೊತೆಗೆ ಜಗತ್ಪ್ರಸಿದ್ಧರಾದ ಅನೇಕ ವಿಜ್ಞಾನಿಗಳನ್ನು ಭೇಟಿಯಾಗುವ ಮತ್ತು ಇಲ್ಲಿ ಪಾಲ್ಗೊಂಡವರ ಪೈಕಿ ಅನೇಕ ಹೊಸ ಗೆಳೆಯರನ್ನು ಪಡೆಯುವ ಅವಕಾಶವೂ ನನಗೆ ಸಿಕ್ಕಿದೆ. ಈ ಸ್ಥಳಕ್ಕೆ ಬರುವ ಮೂಲಕ ನಾನು ಪಡೆದಿರುವ ಪ್ರಯೋಜನಗಳಲ್ಲಿ ಎಲ್ಲಕ್ಕಿಂತಲೂ ಹೆಚ್ಚು ಅಮೂಲ್ಯವಾಗಿರುವುದು ಲಾಇಲಾಹ ಇಲ್ಲಲ್ಲಾಹ್ ಮುಹಮ್ಮದುರ್ರಸೂಲುಲ್ಲಾಹ್ ಮತ್ತು ಮುಸ್ಲಿಮ್ ಆಗುವ ಅವಕಾಶ ನನಗೆ ಸಿಕ್ಕಿರುವುದಾಗಿದೆ."

ಕುರ್‌ಆನ್‌ನಲ್ಲಿರುವ ವೈಜ್ಞಾನಿಕ ಪವಾಡಗಳ ಕೆಲವೊಂದು ಉದಾಹರಣೆಗಳನ್ನು ಮತ್ತು ಅವುಗಳ ಬಗ್ಗೆ ವಿಜ್ಞಾನಿಗಳ ಅಭಿಪ್ರಾಯಗಳನ್ನು ನೋಡಿದ ಬಳಿಕ ನಾವು ನಮ್ಮೊಂದಿಗೇ ಈ ಪ್ರಶ್ನೆಗಳನ್ನು ಕೇಳೋಣ:

■ ಹದಿನಾಲ್ಕು ಶತಮಾನಗಳ ಹಿಂದೆ ಅವತೀರ್ಣಗೊಂಡ ಕುರ್‌ಆನ್‌ನಲ್ಲಿ ವಿಜ್ಞಾನದ ವಿಭಿನ್ನ ಶಾಖೆಗಳಿಗೆ ಸೇರಿದ, ತೀರಾ ಇತ್ತೀಚೆಗೆ ಸಂಶೋಧಿಸಲಾದ ವೈಜ್ಞಾನಿಕ ಮಾಹಿತಿಗಳು ಪ್ರಸ್ತಾಪಿಸಲಾಗಿರುವುದು ಆಕಸ್ಮಿಕವಾಗಿರಲು ಸಾಧ್ಯವೇ?

■ ಈ ಕುರ್‌ಆನನ್ನು ರಚಿಸಲು ಮುಹಮ್ಮದ್(ﷺ)ರಿಗಾಗಲಿ ಅಥವಾ ಇತರ ಯಾರಾದರೂ ಮನುಷ್ಯರಿಗಾಗಲಿ ಸಾಧ್ಯವೇ?

ಇದಕ್ಕಿರುವ ಒಂದೇ ಒಂದು ಸಂಭಾವ್ಯ ಉತ್ತರವು ಈ ಕುರ್‌ಆನ್ ದೇವನಿಂದ ಅವತೀರ್ಣಗೊಂಡಿರುವ ಅವನ ವಚನಗಳಾಗಿವೆ ಎಂಬುದಾಗಿದೆ.

# (2) ಪವಿತ್ರ ಕುರ್‌ಆನ್‌ನ ಅಧ್ಯಾಯಗಳಂತಿರುವ ಒಂದು ಅಧ್ಯಾಯವನ್ನು ರಚಿಸಿ ತರಲು ಒಂದು ಮಹಾ ಸವಾಲು

ದೇವನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

> ﴾**ನಮ್ಮ ದಾಸನಿಗೆ ನಾವು ಅವತೀರ್ಣಗೊಳಿಸಿರುವುದರ** (ಕುರ್‌ಆನ್‌ನ) **ಬಗ್ಗೆ ನೀವು ಸಂದೇಹದಲ್ಲಿದ್ದರೆ ಅದರಂತಿರುವ ಒಂದು ಅಧ್ಯಾಯವನ್ನಾದರೂ ತನ್ನಿರಿ. ಅಲ್ಲಾಹುವಿನ ಹೊರತು ನಿಮಗಿರುವ ಸಹಾಯಕರನ್ನೂ ಆಹ್ವಾನಿಸಿರಿ. ನೀವು ಸತ್ಯಸಂಧರಾಗಿದ್ದರೆ** (ಅದನ್ನು ಮಾಡಿ ತೋರಿಸಿರಿ). **ನಿಮಗೆ ಅದನ್ನು ಮಾಡಲು ಸಾಧ್ಯವಾಗದಿದ್ದಲ್ಲಿ –ಅದನ್ನು ಮಾಡಲು ನಿಮಗೆ ಎಂದೂ ಸಾಧ್ಯವಾಗದು– ಮನುಷ್ಯರನ್ನು ಮತ್ತು ಕಲ್ಲುಗಳನ್ನು ಇಂಧನವಾಗಿ ಉರಿಸಲಾಗುವ ನರಕಾಗ್ನಿಯನ್ನು ಭಯಪಡಿರಿ. ಅದನ್ನು ಸತ್ಯನಿಷೇಧಿಗಳಿಗಾಗಿ ಸಿದ್ಧಗೊಳಿಸಲಾಗಿದೆ.** (ಓ ಪ್ರವಾದಿಯವರೇ!) **ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಾರೋ ಅವರಿಗೆ ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಿವೆ ಎಂಬ ಶುಭವಾರ್ತೆಯನ್ನು ತಿಳಿಸಿರಿ....**﴿ (ಕುರ್‌ಆನ್ 2:23–25)

ಹದಿನಾಲ್ಕು ಶತಮಾನಗಳ ಹಿಂದೆ, ಕುರ್‌ಆನ್ ಅವತೀರ್ಣಗೊಂಡಂದಿನಿಂದ ತೊಡಗಿ ಇಂದಿನ ತನಕ, ಸೌಂದರ್ಯದಲ್ಲಿ, ನಿರರ್ಗಳತೆಯಲ್ಲಿ, ಭವ್ಯತೆಯಲ್ಲಿ, ನ್ಯಾಯಪೂರ್ಣ ಶಾಸನದಲ್ಲಿ, ಸತ್ಯಸಂಧ ಮಾಹಿತಿಗಳಲ್ಲಿ, ನೈಜ ಭವಿಷ್ಯವಾಣಿಗಳಲ್ಲಿ ಹಾಗೂ ಇನ್ನಿತರ ಸಮಗ್ರತೆಗಳಲ್ಲಿ ಕುರ್‌ಆನಿನ ಅಧ್ಯಾಯಗಳನ್ನು ಹೋಲುವಂತಹ ಒಂದೇ ಒಂದು ಅಧ್ಯಾಯವನ್ನು ರಚಿಸಿ ತರಲು ಯಾರಿಗೂ ಸಾಧ್ಯವಾಗಿಲ್ಲ. ಕುರ್‌ಆನ್‌ನ ಅತಿಚಿಕ್ಕ ಅಧ್ಯಾಯವು (108ನೇ ಅಧ್ಯಾಯ) ಕೇವಲ ಹತ್ತು ಪದಗಳನ್ನು ಹೊಂದಿದೆ. ಆದರೂ ಈ ಸವಾಲನ್ನು ಗೆಲ್ಲಲು ಅಂದಿನ




ಕುರ್‌ಆನ್‌ನ ಅತಿಚಿಕ್ಕ ಅಧ್ಯಾಯವು (108ನೇ ಅಧ್ಯಾಯ) ಕೇವಲ ಹತ್ತು ಪದಗಳನ್ನು ಮಾತ್ರ ಹೊಂದಿದೆ. ಆದರೂ ಪವಿತ್ರ ಕುರ್‌ಆನ್‌ನ ಅಧ್ಯಾಯಗಳಂತಿರುವ ಒಂದು ಅಧ್ಯಾಯವನ್ನಾದರೂ ರಚಿಸಿ ತರುವ ಮೂಲಕ ಕುರ್‌ಆನ್‌ನ ಸವಾಲನ್ನು ಗೆಲ್ಲಲು ಯಾರಿಗೂ ಸಾಧ್ಯವಾಗಿಲ್ಲ.

ಕಾಲದಲ್ಲಾಗಲಿ, ಇಂದಿನ ಕಾಲದಲ್ಲಾಗಲಿ ಯಾರಿಗೂ ಸಾಧ್ಯವಾಗಿಲ್ಲ.[1] ಮುಹಮ್ಮದ್(ﷺ)ರ ಶತ್ರುಗಳಾಗಿದ್ದ ಕೆಲವು ಅರಬ್ ಅವಿಶ್ವಾಸಿಗಳು ಇಂತಹ ಒಂದು ಪ್ರಯತ್ನಕ್ಕೆ ಕೈ ಹಾಕಿದ್ದರು. ಆದರೆ ಅವರಿಗೆ ಅದನ್ನು ಮಾಡಲು ಸಾಧ್ಯವಾಗಲಿಲ್ಲ.[2] ಕುರ್‌ಆನ್ ಅವರದ್ದೇ ಭಾಷೆಯಲ್ಲಿ ಅವತೀರ್ಣಗೊಂಡಿದ್ದರೂ ಸಹ, ಮುಹಮ್ಮದ್(ﷺ)ರವರ ಕಾಲದ ಅರಬರು ನಿರರ್ಗಳವಾಗಿ ಅರಬಿ ಮಾತನಾಡುವವರೂ, ಇಂದೂ ಕೂಡ ಓದಲಾಗುವ ಮತ್ತು ಮೆಚ್ಚುಗೆ ಸೂಚಿಸಲಾಗುವ ಅತಿಸುಂದರ ಮತ್ತು ಭವ್ಯ ಕವಿತೆಗಳನ್ನು ರಚಿಸಿದವರಾಗಿದ್ದೂ ಸಹ ಅವರಿಗೆ ಕುರ್‌ಆನ್‌ನ ಸವಾಲನ್ನು ಗೆಲ್ಲಲು ಸಾಧ್ಯವಾಗಲಿಲ್ಲ.

## (3) ಪ್ರವಾದಿ ಮುಹಮ್ಮದ್(ﷺ)ರ ಆಗಮನದ ಬಗ್ಗೆ ಬೈಬಲ್‌ನಲ್ಲಿರುವ ಭವಿಷ್ಯವಾಣಿಗಳು




ಪ್ರವಾದಿ ಮುಹಮ್ಮದ್(ﷺ)ರ ಆಗಮನದ ಬಗ್ಗೆ ಬೈಬಲ್‌ನಲ್ಲಿರುವ ಭವಿಷ್ಯವಾಣಿಗಳು ಇಸ್ಲಾಮ್ ಸತ್ಯವೆಂಬುದಕ್ಕೆ ಬೈಬಲ್‌ನಲ್ಲಿ ವಿಶ್ವಾಸವಿಡುವ ಜನರಿಗೆ ಒಂದು ಪುರಾವೆಯಾಗಿದೆ.

ಧರ್ಮೋಪದೇಶಕಾಂಡ 18ರಲ್ಲಿ, ದೇವನು ತನ್ನೊಂದಿಗೆ ಹೇಳಿದ್ದಾಗಿ ಮೋಶೆ ಹೇಳುತ್ತಾರೆ: **"ನಾನು ಅವರಿಗಾಗಿ ನಿನ್ನ ತರಹದ ಒಬ್ಬ ಪ್ರವಾದಿಯನ್ನು ಅವರ ಸಹೋದರರಿಂದಲೇ ಕಳುಹಿಸುವೆನು. ನಾನು ನನ್ನ ವಚನಗಳನ್ನು ಅವನ ಬಾಯಲ್ಲಿಡುವೆನು. ನಾನು ಆಜ್ಞಾಪಿಸುವುದೆಲ್ಲವನ್ನು ಅವನು ಜನರಿಗೆ ತಿಳಿಸುವನು. ಈ ಪ್ರವಾದಿಯು ನನ್ನ ಹೆಸರಲ್ಲಿ ಮಾತನಾಡುವಾಗ ಯಾವನಾದರೂ ನನ್ನ ಆಜ್ಞೆಗಳನ್ನು ಕೇಳದೇ ಹೋದರೆ ನಾನು ಅವನನ್ನು ಶಿಕ್ಷಿಸುವೆನು."** (ಧರ್ಮೋಪದೇಶಕಾಂಡ 18:18–19)[3]

ಈ ಭವಿಷ್ಯವಾಣಿಯಲ್ಲಿ ಸೂಚಿಸಲಾದ ಪ್ರವಾದಿಗೆ ಈ ಕೆಳಗಿನ ವೈಶಿಷ್ಟ್ಯತೆಗಳಿರಬೇಕಾಗಿದೆ:

1) ಆ ಪ್ರವಾದಿಯು ಮೋಶೆಯಂತಿರುವರು.

2) ಆ ಪ್ರವಾದಿಯು ಇಸ್ರಾಯೇಲರ ಸಹೋದರರಿಂದ, ಅಂದರೆ ಇಷ್ಮಾಯೇಲರಿಂದ ಬರುವವರು.

3) ದೇವನು ತನ್ನ ವಚನಗಳನ್ನು ಆ ಪ್ರವಾದಿಯ ಬಾಯಲ್ಲಿಡುವರು. ಆಗ ಅವರು ದೇವನು ಆಜ್ಞಾಪಿಸಿದ್ದನ್ನು ಘೋಷಿಸುವರು.

ಈ ಮೂರು ವೈಶಿಷ್ಟ್ಯತೆಗಳನ್ನು ಇನ್ನಷ್ಟು ಆಳವಾಗಿ ಪರಿಶೋಧಿಸೋಣ:

---

1. ನೋಡಿ: *Al-Borhan fee Oloom Al-Qur'an*, Al-Zarkashy, vol. 2, p. 224.
2. ನೋಡಿ: *Al-Borhan fee Oloom Al-Qur'an*, Al-Zarkashy, vol. 2, p. 226.
3. ಈ ಬೈಬಲ್ ಸೂಕ್ತಿಯನ್ನು *The NIV Study Bible, New International Version* ದಿಂದ ತೆಗೆಯಲಾಗಿದೆ.

**1) ಮೋಶೆಯಂತಿರುವ ಪ್ರವಾದಿ:**

ಮೋಶೆ ಮತ್ತು ಮುಹಮ್ಮದ್(ﷺ)ರಂತೆ ಪರಸ್ಪರ ಹೊಂದಾಣಿಕೆಯಾಗುವ ಬೇರೆ ಎರಡು ಪ್ರವಾದಿಗಳು ಇರಲೇ ಇಲ್ಲ. ಇವರಿಬ್ಬರಿಗೂ ಸಮಗ್ರವಾಗಿ ಕಾನೂನು ಹಾಗೂ ಜೀವನ ನಿಯಮಗಳನ್ನು ದಯಪಾಲಿಸಲಾಗಿತ್ತು. ಇವರಿಬ್ಬರೂ ತಮ್ಮ ಶತ್ರುಗಳನ್ನು ಎದುರಿಸಿ ಪವಾಡಸದೃಶ ರೀತಿಯಲ್ಲಿ ವಿಜಯಗಳಿಸಿದ್ದರು. ಇವರಿಬ್ಬರನ್ನೂ ಪ್ರವಾದಿ ಹಾಗೂ ಆಡಳಿತಗಾರರೆಂದು ಅಂಗೀಕರಿಸಲಾಗಿತ್ತು. ಇವರಿಬ್ಬರೂ ಕೊಲೆ ಸಂಚಿನ ನಿಮಿತ್ತ ಊರು ತೊರೆದು ವಲಸೆ ಹೋಗಿದ್ದರು. ಆದರೆ ಮೋಶೆ ಮತ್ತು ಯೇಸುವಿನ ಮಧ್ಯೆಯಿರುವ ಹೊಂದಾಣಿಕೆಗಳು ಈ ಮೇಲಿನ ವಿಷಯಗಳಿಗೆ ಮಾತ್ರವಲ್ಲದೆ ಇನ್ನಿತರ ಗಂಭೀರ ವಿಷಯಗಳಿಗೂ ವಿರುದ್ಧವಾಗಿವೆ. ಉದಾಹರಣೆಗೆ, ಮೋಶೆಯ ಸಹಜ ಜನನ, ಕೌಟುಂಬಿಕ ಜೀವನ ಮತ್ತು ಮರಣವು ಮುಹಮ್ಮದ್(ﷺ)ರನ್ನು ಹೋಲುತ್ತದೆಯೇ ವಿನಾ ಯೇಸುವನ್ನು ಹೋಲುವುದಿಲ್ಲ. ಅಷ್ಟೇ ಅಲ್ಲದೆ, ಯೇಸು ತಮ್ಮ ಅನುಯಾಯಿಗಳಿಂದ ದೇವಪುತ್ರನೆಂದು ಕರೆಸಿಕೊಂಡಿದ್ದರೇ ವಿನಾ ಪ್ರವಾದಿಯೆಂದಲ್ಲ. ಆದರೆ ಮೋಶೆ ಮತ್ತು ಮುಹಮ್ಮದ್(ﷺ)ರವರು, ಹಾಗೂ ಮುಸ್ಲಿಮರ ನಂಬಿಕೆಯ ಪ್ರಕಾರ ಯೇಸು ಪ್ರವಾದಿಯೆಂದು ಕರೆಸಿಕೊಂಡಿದ್ದರು. ಆದ್ದರಿಂದ ಈ ಭವಿಷ್ಯವಾಣಿಯು ಮುಹಮ್ಮದ್(ﷺ)ರಲ್ಲಿ ನಿಜವಾಗುತ್ತದೆಯೇ ವಿನಾ ಯೇಸುವಿನಲ್ಲಲ್ಲ. ಯಾಕೆಂದರೆ ಯೇಸುವಿಗಿಂತಲೂ ಮೋಶೆಯೊಂದಿಗೆ ಹೆಚ್ಚು ಹೋಲಿಕೆಯಾಗುವುದು ಮುಹಮ್ಮದ್(ﷺ)ರವರಾಗಿದ್ದಾರೆ.

ಮಾತ್ರವಲ್ಲ, ಯೋಹಾನರ ಸುವಾರ್ತೆಯನ್ನು ನೋಡಿದರೆ ಯಹೂದರು ಮೂರು ವ್ಯತ್ಯಸ್ತ ಭವಿಷ್ಯವಾಣಿಗಳ ಈಡೇರಿಕೆಗಾಗಿ ಕಾಯುತ್ತಿದ್ದರು: 1) ಕ್ರಿಸ್ತನ ಆಗಮನ, 2) ಎಲೀಯನ ಆಗಮನ, 3) ಪ್ರವಾದಿಯ ಆಗಮನ. ಸ್ನಾನಿಕ ಯೋಹಾನರೊಂದಿಗೆ ಕೇಳಲಾದ ಈ ಮೂರು ಪ್ರಶ್ನೆಗಳಿಂದ ಇದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬಹುದಾಗಿದೆ: **"ನೀನು ಯಾರು ಎಂದು ಯೋಹಾನನನ್ನು ಕೇಳುವುದಕ್ಕಾಗಿ ಜೆರೂಸಲೇಮಿನ ಯಹೂದರು ಯೋಹಾನನ ಬಳಿಗೆ ಕೆಲವು ಯಾಜಕರನ್ನು ಮತ್ತು ಲೇವಿಯರನ್ನು ಕಳುಹಿಸಿದರು. ಯೋಹಾನನು ಮರೆಮಾಚದೆ, 'ನಾನು ಕ್ರಿಸ್ತನಲ್ಲ' ಎಂದು ಹೇಳಿದನು. ಯಹೂದರು ಯೋಹಾನನಿಗೆ 'ಹಾಗಾದರೆ ನೀನು ಯಾರು? ನೀನು ಎಲೀಯನೋ?' ಎಂದು ಕೇಳಿದರು. ಅವನು, 'ಇಲ್ಲ, ನಾನು ಎಲೀಯನಲ್ಲ' ಎಂದು ಉತ್ತರಿಸಿದನು. ಯಹೂದರು, 'ನೀನು ಪ್ರವಾದಿಯೋ?' ಎಂದು ಕೇಳಿದರು. 'ಇಲ್ಲ, ನಾನು ಪ್ರವಾದಿಯಲ್ಲ' ಎಂದು ಉತ್ತರಕೊಟ್ಟನು."** (ಯೋಹಾನ 1:19–21). ಬೈಬಲ್‌ನಲ್ಲಿ ನೀಡಲಾಗಿರುವ ಟಿಪ್ಪಣಿಗಳನ್ನು ನೋಡಿದರೆ, ಯೋಹಾನ 1:21ರಲ್ಲಿರುವ ಪ್ರವಾದಿ ಎಂಬ ಪದವನ್ನು ಧರ್ಮೋಪದೇಶಕಾಂಡದ 18:15 ಮತ್ತು 18:18ರಡೆಗೆ ಜೋಡಿಸಿರುವುದಾಗಿ ಕಾಣಬಹುದು.[1] ಧರ್ಮೋಪದೇಶಕಾಂಡ 18:18ರಲ್ಲಿರುವ ಭವಿಷ್ಯವಾಣಿಯು ಯೇಸುಕ್ರಿಸ್ತರ ಬಗ್ಗೆ ಅಲ್ಲವೆಂದು ಸ್ಪಷ್ಟವಾಗಿ ಹೇಳಬಹುದಾಗಿದೆ.

**2) ಇಸ್ರಾಯೇಲರ ಸಹೋದರರಿಂದ:**

ಅಬ್ರಹಾಮರಿಗೆ ಇಬ್ಬರು ಮಕ್ಕಳಿದ್ದರು, ಇಷ್ಮಾಯೇಲ್ ಮತ್ತು ಇಸಾಕ್ (ಆದಿಕಾಂಡ 21). ಇಷ್ಮಾಯೇಲರು ಅರಬ್ ಜಗತ್ತಿನ ಪಿತಾಮಹರಾದರೆ ಇಸಾಕರು ಯಹೂದ ಜಗತ್ತಿನ ಪಿತಾಮಹರಾದರು. ಭವಿಷ್ಯವಾಣಿಯಲ್ಲಿ ಹೇಳಲಾದ ಪ್ರವಾದಿ ಯಹೂದರ ನಡುವಿನಿಂದ ಬರುವ ಪ್ರವಾದಿಯಾಗಿರಲಿಲ್ಲ, ಬದಲಾಗಿ ಅವರ ಸಹೋದರರ ನಡುವಿನಿಂದ, ಅಂದರೆ

1. *The NIV Study Bible, New International Version* ನ ಸೂಕ್ತಿ 1:21ಕ್ಕೆ (ಪುಟ 1594) ನೀಡಲಾಗಿರುವ ಟಿಪ್ಪಣಿಯನ್ನು ನೋಡಿರಿ.

ಇಷ್ಮಾಯೇಲರ ನಡುವಿನಿಂದ ಬರುವ ಪ್ರವಾದಿಯಾಗಿದ್ದಾರೆ. ಇಷ್ಮಾಯೇಲರ ಸಂತತಿಯಲ್ಲಿ ಜನಿಸಿದ ಮುಹಮ್ಮದ್(ﷺ)ರವರೇ ಆ ಪ್ರವಾದಿಯಾಗಿದ್ದಾರೆ.

ಮಾತ್ರವಲ್ಲದೆ, ನ್ಯಾಯವನ್ನು ಹೊತ್ತು ತರುವ ದೇವನ ವಿಶೇಷ ಸೇವಕನ ಬಗ್ಗೆ, ಅವನ ಆರಿಸಿಕೊಂಡ ದಾಸನ ಬಗ್ಗೆ ಯೆಶಾಯ 42:1–13 ಮಾತನಾಡುತ್ತದೆ. **"ಲೋಕದಲ್ಲಿ ನ್ಯಾಯವನ್ನು ಸ್ಥಾಪಿಸುವ ತನಕ ಆತನು ಬಲಹೀನನಾಗುವುದಿಲ್ಲ, ಮುಗ್ಗರಿಸುವುದೂ ಇಲ್ಲ, ದೂರ ದೇಶದಲ್ಲಿರುವವರು ಸಹ ಆತನ ಬೋಧನೆಯನ್ನು ನಂಬುವರು."** (ಯೆಶಾಯ 42:4). 11ನೇ ಸೂಕ್ತಿಯು ಆ ಪ್ರವಾದಿಯು ಕೇದಾರರ ಸಂತತಿಯಲ್ಲಿ ಬರುವವರು ಎನ್ನುತ್ತದೆ. ಈ ಕೇದಾರ್ ಯಾರು? ಆದಿಕಾಂಡ 25:13ರ ಪ್ರಕಾರ ಅವರು ಇಷ್ಮಾಯೇಲರ ಎರಡನೇ ಪುತ್ರ, ಅಂದರೆ ಪ್ರವಾದಿ ಮುಹಮ್ಮದ್(ﷺ)ರ ಪಿತಾಮಹ.

**3) ದೇವನು ತನ್ನ ವಚನಗಳನ್ನು ಆ ಪ್ರವಾದಿಯ ಬಾಯಲ್ಲಿಡುವನು:**

ದೇವನ ವಚನಗಳನ್ನು (ಪವಿತ್ರ ಕುರ್‌ಆನನ್ನು) ಮುಹಮ್ಮದ್(ﷺ)ರ ಬಾಯಲ್ಲಿಡಲಾಗಿತ್ತು. ದೇವನ ವಚನಗಳನ್ನು (ಪವಿತ್ರ ಕುರ್‌ಆನನ್ನು) ಅಕ್ಷರಾರ್ಥದಲ್ಲಿ ಕಲಿಸಿಕೊಡಲು ದೇವನು ದೇವದೂತರಾದ ಗೇಬ್ರಿಯೆಲ್‌ರನ್ನು ಕಳುಹಿಸಿದನು. ಪ್ರವಾದಿ ಮುಹಮ್ಮದ್(ﷺ)ರು ಆ ವಚನಗಳನ್ನು ಜನರಿಗೆ ಬೋಧಿಸಿದರು. ಆದ್ದರಿಂದ ಆ ವಚನಗಳು ಮುಹಮ್ಮದ್(ﷺ)ರದ್ದಲ್ಲ. ಅವು ಅವರ ಆಲೋಚನೆಗಳಿಂದ ಉದ್ಭವಿಸಿದ್ದಲ್ಲ. ಬದಲಾಗಿ ದೇವದೂತರಾದ ಗೇಬ್ರಿಯೆಲ್‌ರು ಅವುಗಳನ್ನು ಅವರ ಬಾಯಲ್ಲಿಟ್ಟದ್ದಾಗಿದೆ. ಪ್ರವಾದಿ ಮುಹಮ್ಮದ್(ﷺ)ರ ಕಾಲದಲ್ಲೇ, ಅವರ ಮೇಲುಸ್ತುವಾರಿಯಲ್ಲಿ ಈ ವಚನಗಳನ್ನು ಅವರ ಅನುಯುಯಾಯಿಗಳು ಕಂಠಪಾಠ ಮಾಡಿದರು ಮತ್ತು ಬರೆದಿಟ್ಟರು.

ದೇವನು ಧರ್ಮೋಪದೇಶಕಾಂಡದಲ್ಲಿ ಹೇಳಿದ್ದನ್ನು ಸ್ಮರಿಸಿರಿ. **"ಈ ಪ್ರವಾದಿಯು ನನ್ನ ಹೆಸರಲ್ಲಿ ಮಾತನಾಡುವಾಗ ಯಾವನಾದರೂ ನನ್ನ ಆಜ್ಞೆಗಳನ್ನು ಕೇಳದೇ ಹೋದರೆ ನಾನು ಅವನನ್ನು ಶಿಕ್ಷಿಸುವೆನು."** ಇದರರ್ಥವೇನೆಂದರೆ ಯಾರೆಲ್ಲ ಬೈಬಲ್‌ನಲ್ಲಿ ನಂಬಿಕೆಯಿಡುತ್ತಾರೋ ಅವರೆಲ್ಲರೂ ಈ ಪ್ರವಾದಿ, ಅಂದರೆ ಪ್ರವಾದಿ ಮುಹಮ್ಮದ್(ﷺ)ರು ಹೇಳುವುದರಲ್ಲೂ ನಂಬಿಕೆಯಿಡಬೇಕಾಗಿದೆ.

## (4) ಈಗಾಗಲೇ ಸಂಭವಿಸಿರುವ ಕೆಲವು ಘಟನೆಗಳ ಬಗ್ಗೆ ಭವಿಷ್ಯವಾಣಿಯನ್ನು ಹೊಂದಿರುವ ಕುರ್‌ಆನ್‌ನ ಕೆಲವು ಸೂಕ್ತಿಗಳು

ಕುರ್‌ಆನಿನಲ್ಲಿ ಮುಂದಾಗಿ ಹೇಳಲಾದ ಕೆಲವು ಘಟನೆಗಳ ಪೈಕಿ ಒಂದು ರೋಮನ್ನರು ಪರ್ಶಿಯನ್ನರಿಂದ ಪರಾಭವಗೊಂಡ ಬಳಿಕ ಕೇವಲ ಮೂರರಿಂದ ಒಂಬತ್ತು ವರ್ಷಗಳೊಳಗೆ ಮರಳಿ ಗೆಲ್ಲುವರು ಎಂಬ ಭವಿಷ್ಯವಾಗಿದೆ. ದೇವನು ಕುರ್‌ಆನಿನಲ್ಲಿ ಹೇಳಿದನು:

> ﴾(ಅರೇಬಿಯಾದ) **ಸಮೀಪ ಪ್ರದೇಶದಲ್ಲಿ ರೋಮನ್ನರು ಸೋಲಿಸಲ್ಪಟ್ಟಿರುವರು. ತಮ್ಮ ಸೋಲಿನ ಬಳಿಕ ಕೆಲವೇ** (ಮೂರರಿಂದ ಒಂಬತ್ತು) **ವರ್ಷಗಳಲ್ಲಿ ಅವರು ಜಯಗಳಿಸುವರು.**﴿ (ಕುರ್‌ಆನ್ 30:2–4)

ಈ ಯುದ್ಧಗಳ ಬಗ್ಗೆ ಇತಿಹಾಸ ಏನೆನ್ನುತ್ತದೆಂದು ನೋಡೋಣ. History of the Byzantine State ಎಂಬ ಗ್ರಂಥವು ಹೇಳುವಂತೆ ಕ್ರಿ.ಶ. 613ರಲ್ಲಿ ರೋಮನ್ ಸೇನೆಯು ಅಂತೋಕಿಯಾದಲ್ಲಿ ಹೀನವಾಗಿ ಪರಾಭವಗೊಂಡಿತು. ಇದರ ಫಲವಾಗಿ ಪರ್ಶಿಯನ್ನರು ಶೀಘ್ರವಾಗಿ ಮುನ್ನುಗ್ಗತೊಡಗಿದರು.[1] ಆ ಸಂದರ್ಭದಲ್ಲಿ ರೋಮನ್ನರು ಪರ್ಶಿಯನ್ನರನ್ನು ಸೋಲಿಸುವರು ಎಂಬುದನ್ನು ಊಹಿಸಲೂ ಅಸಾಧ್ಯವಾಗಿತ್ತು. ಆದರೆ ಮೂರರಿಂದ ಒಂಬತ್ತು ವರ್ಷಗಳೊಳಗೆ ರೋಮನ್ನರು ಜಯಗಳಿಸುವರೆಂದು ಕುರ್‌ಆನ್ ಭವಿಷ್ಯ ನುಡಿಯಿತು. ಕ್ರಿ.ಶ. 622ರಲ್ಲಿ ಒಂಬತ್ತು ವರ್ಷಗಳ ಬಳಿಕ ರೋಮನ್ ಮತ್ತು ಪರ್ಶಿಯನ್ ಸೇನೆಯು ಅರ್ಮೇನಿಯಾದ ಮಣ್ಣಿನಲ್ಲಿ ಎದುರುಗೊಂಡಿತು. ಈ ಕದನವು ರೋಮನ್ನರ ನಿರ್ಣಾಯಕ ಗೆಲುವಿನೊಂದಿಗೆ ಸಮಾಪ್ತಿಗೊಂಡಿತು.[2] ದೇವನು ಕುರ್‌ಆನಿನಲ್ಲಿ ಹೇಳಿದಂತೆ ಭವಿಷ್ಯವು ನೆರವೇರಿತು.

ಇದಲ್ಲದೆ, ನಂತರ ಸತ್ಯವಾಗಿ ಪರಿಣಮಿಸಿದ ಅನೇಕ ಘಟನೆಗಳನ್ನು ಮುಂದಾಗಿ ಹೇಳಲಾಗಿರುವುದನ್ನು ಕುರ್‌ಆನ್ ಮತ್ತು ಪ್ರವಾದಿವಚನಗಳಲ್ಲಿ ಕಾಣಬಹುದಾಗಿದೆ.

## (5) ಪ್ರವಾದಿ ಮುಹಮ್ಮದ್(ﷺ)ರು ತೋರಿಸಿದ ಪವಾಡಗಳು

ದೇವನ ಅನುಮತಿಯ ಪ್ರಕಾರ ಪ್ರವಾದಿ ಮುಹಮ್ಮದ್(ﷺ)ರು ಅನೇಕ ಪವಾಡಗಳನ್ನು ತೋರಿಸಿದ್ದರು. ಈ ಪವಾಡಗಳನ್ನು ಅನೇಕ ಜನರು ಕಣ್ಣಾರೆ ಕಂಡಿದ್ದರು. ಉದಾಹರಣೆಗೆ:

■ ತಮಗೆ ಒಂದು ಪವಾಡ ತೋರಿಸಿಕೊಡುವಂತೆ ಮಕ್ಕಾದ ಅವಿಶ್ವಾಸಿಗಳು ಪ್ರವಾದಿ ಮುಹಮ್ಮದ್(ﷺ)ರೊಂದಿಗೆ ಬೇಡಿಕೆಯಿಟ್ಟಾಗ ಅವರು ಚಂದ್ರನನ್ನು ಇಬ್ಭಾಗವಾಗಿಸಿ ತೋರಿಸಿದರು.[3]

■ ಇನ್ನೊಂದು ಪವಾಡವು, ಮುಹಮ್ಮದ್(ﷺ)ರ ಅನುಯಾಯಿಗಳು ದಾಹದಿಂದ ಬಳಲಿದಾಗ ಮತ್ತು ಒಂದು ಪಾತ್ರೆಯಲ್ಲಿ ಸ್ವಲ್ಪಮಾತ್ರ ನೀರಿದ್ದಾಗ, ಪ್ರವಾದಿ ಮುಹಮ್ಮದ್(ﷺ)ರ ಬೆರಳುಗಳೆಡೆಯಿಂದ ನೀರು ಹರಿದ ಪವಾಡವಾಗಿದೆ. ತಮಗೆ ಅಂಗಶುದ್ಧಿ ಮಾಡಲು ಮತ್ತು ಕುಡಿಯಲು ಇದರ ಹೊರತು ಬೇರೆ ನೀರಿಲ್ಲವೆಂದು ಪಾತ್ರೆಯಲ್ಲಿರುವ ಸ್ವಲ್ಪ ನೀರಿನೊಂದಿಗೆ ಅನುಯಾಯಿಗಳು ಅವರ ಬಳಿಗೆ ಬಂದರು. ಆಗ ಅವರು ಅದರಲ್ಲಿ ತಮ್ಮ ಕೈಯನ್ನಿಟ್ಟರು. ಆಗ ನೀರು ಅವರ ಬೆರಳುಗಳೆಡೆಯಿಂದ ಹರಿಯತೊಡಗಿತು. ಅವರು ನೀರನ್ನು ಕುಡಿದರು ಮತ್ತು ಅಂಗಶುದ್ಧಿ ಮಾಡಿದರು. ಅವರು ಒಂದು ಸಾವಿರದ ಐದು ನೂರು ಜನರಿದ್ದರು.[4]

ಇವುಗಳಲ್ಲದೆ ಇನ್ನೂ ಅನೇಕ ಪವಾಡಗಳನ್ನು ಅವರು ತೋರಿಸಿದ್ದಾರೆ ಅಥವಾ ಅವರ ಮೂಲಕ ಸಂಭವಿಸಿದೆ.

---

1. *History of the Byzantine State*, Ostrogorsky, p. 95.
2. *History of the Byzantine State*, Ostrogorsky, pp. 100-101, ಮತ್ತು *History of Persia*, Sykes, vol. 1, pp. 483-484. ನೋಡಿ: *The New Encyclopaedia Britannica*, Micropaedia vol. 4, p. 1036.
3. *ಸಹೀಹುಲ್ ಬುಖಾರಿ* #3637 ಮತ್ತು *ಸಹೀಹ್ ಮುಸ್ಲಿಮ್* #2802
4. *ಸಹೀಹುಲ್ ಬುಖಾರಿ* #3576 ಮತ್ತು *ಸಹೀಹ್ ಮುಸ್ಲಿಮ್* #1856

# (6) ಮುಹಮ್ಮದ್(ﷺ)ರ ಸರಳ ಜೀವನ

ಮುಹಮ್ಮದ್(ﷺ)ರು ತಮ್ಮ ಬೋಧನೆಯನ್ನು ಆರಂಭಿಸುವುದಕ್ಕೆ ಮುಂಚಿನ ಅವರ ಬದುಕನ್ನು, ಬೋಧನೆಯನ್ನು ಆರಂಭಿಸಿದ ಬಳಿಕದ ಅವರ ಬದುಕಿನೊಂದಿಗೆ ಹೋಲಿಸಿ ನೋಡಿದರೆ ಅವರು ಭೌತಿಕ ಲಾಭವನ್ನಾಗಲಿ, ಪ್ರಸಿದ್ಧಿಯನ್ನಾಗಲಿ, ಸಾರ್ವಭೌಮತ್ವವನ್ನಾಗಲಿ ಅಥವಾ ಅಧಿಕಾರವನ್ನಾಗಲಿ ಪಡೆಯಲು ಪ್ರವಾದಿತ್ವ ವಾದಿಸಿದ ಸುಳ್ಳು ಪ್ರವಾದಿಯಾಗಿರಲಿಲ್ಲ ಎಂದು ಯಾವುದೇ ಅಳುಕಿಲ್ಲದೆ ಸ್ಪಷ್ಟವಾಗಿ ಹೇಳಬಹುದಾಗಿದೆ.

ಪ್ರವಾದಿಯಾಗುವ ಮೊದಲು, ಮುಹಮ್ಮದ್(ﷺ)ರಿಗೆ ಆರ್ಥಿಕ ಸಮಸ್ಯೆಗಳಿರಲಿಲ್ಲ. ಒಬ್ಬ ಯಶಸ್ವಿ ಹಾಗೂ ಪ್ರಖ್ಯಾತ ವ್ಯಾಪಾರಿಯಾಗಿ ಅವರು ಸಂತೃಪ್ತ ಹಾಗೂ ಅನುಕೂಲಕರ ಆದಾಯವನ್ನು ಪಡೆಯುತ್ತಿದ್ದರು. ಆದರೆ ಪ್ರವಾದಿಯಾದ ಬಳಿಕ, ಆರ್ಥಿಕವಾಗಿ ಅವರು ಬಹಳ ಬಳಲಿದರು. ಇದನ್ನು ಸ್ಪಷ್ಟವಾಗಿ ತಿಳಿಯಲು ಅದರ ಬಗ್ಗೆ ಅವರ ಕುಟುಂಬಿಕರು ಮತ್ತು ಸಹಚರರು ಏನೆನ್ನುತ್ತಾರೆಂದು ನೋಡೋಣ:

ಮುಹಮ್ಮದ್(ﷺ)ರ ಪತ್ನಿ ಆಯಿಶಾ ಹೇಳುತ್ತಾರೆ: "ಓ ಸೋದರ ಪುತ್ರಾ! ಪ್ರವಾದಿಯವರ ಮನೆಯಲ್ಲಿ ಒಲೆಯನ್ನು ಉರಿಸದೆ ನಾವು ಎರಡು ತಿಂಗಳುಗಳಲ್ಲಿ ಮೂರು ಹುಣ್ಣಿಮೆಗಳನ್ನು ನೋಡುತ್ತಿದ್ದೆವು." "ಓ ಅತ್ತೆಯವರೇ! ಹಾಗಾದರೆ ನೀವು ತಿನ್ನುವುದಕ್ಕಾಗಿ ಏನು ಮಾಡುತ್ತಿದ್ದಿರಿ?" ಎಂದು ಸೋದರ ಪುತ್ರನು ಕೇಳಿದಾಗ, "ಎರಡು ಕಪ್ಪು ವಸ್ತುಗಳನ್ನು –ಖರ್ಜೂರ ಮತ್ತು ನೀರನ್ನು– ಸೇವಿಸುತ್ತಿದ್ದೆವು. ಅನ್ಸಾರಿಗಳಲ್ಲಿ ಸೇರಿದ ಪ್ರವಾದಿಯವರ ನೆರೆಯವರು ಕೆಲವೊಮ್ಮೆ ಒಂಟೆಯ ಹಾಲನ್ನು ಕಳಿಸಿಕೊಟ್ಟರೆ ಅದನ್ನು ಕುಡಿಯುತ್ತಿದ್ದೆವು." ಎಂದು ಅವರು ಉತ್ತರಿಸಿದರು.[1]

ಮುಹಮ್ಮದ್(ﷺ)ರ ಅನುಯಾಯಿಗಳಲ್ಲಿ ಒಬ್ಬರಾದ ಸಹ್ಲ್ ಇಬ್ನ್ ಸಅ್‌ದ್ ಹೇಳುತ್ತಾರೆ: "ಅಲ್ಲಾಹನ ಪ್ರವಾದಿಯವರು ಪ್ರವಾದಿಯಾದ ಬಳಿಕ ಮರಣದ ತನಕ ಜರಡಿಯಲ್ಲಿ ಸೋಸಿದ ಹಿಟ್ಟನ್ನು ಕಂಡೇ ಇಲ್ಲ."[2]

ಮುಹಮ್ಮದ್(ﷺ)ರ ಪತ್ನಿ ಆಯಿಶಾ ಹೇಳುತ್ತಾರೆ: "ಪ್ರವಾದಿಯವರು ಮಲಗುತ್ತಿದ್ದ ಚಾಪೆಯು ಖರ್ಜೂರದ ನಾರುಗಳನ್ನು ತುಂಬಿಸಿದ ಚರ್ಮದಿಂದ ನಿರ್ಮಿಸಿದ್ದಾಗಿತ್ತು."[3]

ಮುಹಮ್ಮದ್(ﷺ)ರ ಅನುಯಾಯಿಗಳಲ್ಲಿ ಒಬ್ಬರಾದ ಅಮ್ರ್ ಇಬ್ನುಲ್ ಹಾರಿಸ್ ಹೇಳುತ್ತಾರೆ: "ಪ್ರವಾದಿಯವರು ಮರಣಹೊಂದಿದಾಗ ಅವರು ತಮ್ಮ ಆಸ್ತಿಯಾಗಿ ಏನನ್ನೂ ಬಿಟ್ಟು ಹೋಗಿರಲಿಲ್ಲ; ಒಂದು ಬಿಳಿ ಹೇಸರಗತ್ತೆ, ಯುದ್ಧ ಕವಚ ಮತ್ತು ದಾನವಾಗಿ ಕೊಡಲು ಇಟ್ಟಿದ್ದ ಒಂದು ತುಂಡು ಭೂಮಿಯ ಹೊರತು."[4]

ಮುಸ್ಲಿಮರ ಸಾರ್ವಜನಿಕ ಖಜಾನೆಯು ತುಂಬಿ ತುಳುಕುತ್ತಿದ್ದರೂ, ಮುಹಮ್ಮದ್(ﷺ)ರ ಮರಣಕ್ಕೆ ಮುಂಚೆಯೇ ಅರೇಬಿಯನ್ ಉಪದ್ವೀಪದ ಬಹುಭಾಗವು ಮುಸ್ಲಿಮರ ತೆಕ್ಕೆಗೆ ಬಂದಿದ್ದರೂ, ಅವರ ಪ್ರವಾದಿತ್ವದ ಹದಿನೆಂಟು ವರ್ಷಗಳೊಳಗೇ ಮುಸ್ಲಿಮರು ಜಯಶಾಲಿಗಳಾಗಿದ್ದರೂ, ಮುಹಮ್ಮದ್(ﷺ)ರು ತಮ್ಮ ಮರಣದವರೆಗೆ ಆರ್ಥಿಕವಾಗಿ ಬಹಳ ಕಷ್ಟದಲ್ಲಿದ್ದರು.

1. *ಸಹೀಹುಲ್ ಬುಖಾರಿ* #2567 ಮತ್ತು *ಸಹೀಹ್ ಮುಸ್ಲಿಮ್* #2972
2. *ಸಹೀಹುಲ್ ಬುಖಾರಿ* #5413 ಮತ್ತು *ತಿರ್ಮಿದಿ* #2364
3. *ಸಹೀಹುಲ್ ಬುಖಾರಿ* #6456 ಮತ್ತು *ಸಹೀಹ್ ಮುಸ್ಲಿಮ್* #2082
4. *ಸಹೀಹುಲ್ ಬುಖಾರಿ* #2739 ಮತ್ತು *ಮುಸ್ನದ್ ಅಹ್ಮದ್* #17990

ಪದವಿ, ಖ್ಯಾತಿ ಹಾಗೂ ಅಧಿಕಾರವನ್ನು ಪಡೆಯುವುದಕ್ಕಾಗಿ ಮುಹಮ್ಮದ್(ﷺ)ರು ಪ್ರವಾದಿತ್ವವನ್ನು ವಾದಿಸಿದರು ಎಂದು ಹೇಳಲು ಸಾಧ್ಯವೇ? ಪದವಿ ಮತ್ತು ಅಧಿಕಾರವನ್ನು ಅನುಭವಿಸುವ ಬಯಕೆಯು ಯಾವತ್ತೂ ಉತ್ತಮ ಆಹಾರ, ಅಂದಚೆಂದದ ಉಡುಪುಗಳು, ಅದ್ಭುತ ಅರಮನೆಗಳು, ಬಣ್ಣಬಣ್ಣದ ಕಾವಲುಗಾರರು ಮತ್ತು ನಿರಂಕುಶ ಆಧಿಪತ್ಯದ ಜೊತೆಗೆ ಥಳಕು ಹಾಕಿಕೊಂಡಿರುತ್ತದೆ. ಆದರೆ ಇವುಗಳಲ್ಲಿ ಯಾವುದಾದರೂ ಮುಹಮ್ಮದ್(ﷺ)ರಿಗೆ ಇತ್ತೇ? ಅವರ ಜೀವನದ ಕೆಲವು ತುಣುಕುಗಳು ಈ ಪ್ರಶ್ನೆಗೆ ಉತ್ತರ ನೀಡಬಹುದು:

ಒಬ್ಬ ಪ್ರವಾದಿ, ಶಿಕ್ಷಕ, ಆಡಳಿತಗಾರ, ನ್ಯಾಯಾಧೀಶ ಮೊದಲಾದ ಜವಾಬ್ದಾರಿಗಳನ್ನು ನಿಭಾಯಿಸುವುದರೊಂದಿಗೆ ಅವರು ಸ್ವತಃ ಆಡಿನ ಹಾಲು ಹಿಂಡುತ್ತಿದ್ದರು,[1] ತಮ್ಮ ಬಟ್ಟೆಗಳನ್ನು ಮತ್ತು ಚಪ್ಪಲಿಯನ್ನು ಸ್ವತಃ ದುರಸ್ತಿ ಮಾಡುತ್ತಿದ್ದರು,[2] ಮನೆಗೆಲಸಗಳಲ್ಲಿ ನೆರವಾಗುತ್ತಿದ್ದರು[3] ಮತ್ತು ರೋಗಿಗಳನ್ನು ಸಂದರ್ಶಿಸುತ್ತಿದ್ದರು.[4] ಹೊಂಡ ತೋಡುವಾಗಲೂ ಅವರು ತಮ್ಮ ಅನುಯಾಯಿಗಳಿಗೆ ನೆರವಾಗುತ್ತಿದ್ದರು.[5] ಅವರು ಜೀವನವು ಸರಳತೆಯ ಮತ್ತು ವಿನಯತೆಯ ಅನುಪಮ ಉದಾಹರಣೆಯಾಗಿತ್ತು.

ಮುಹಮ್ಮದ್(ﷺ)ರ ಅನುಯಾಯಿಗಳು ಅವರನ್ನು ಅತ್ಯಧಿಕವಾಗಿ ಪ್ರೀತಿಸುತ್ತಿದ್ದರು, ಗೌರವಿಸುತ್ತಿದ್ದರು ಮತ್ತು ಅವರಲ್ಲಿ ಅಪಾರ ಭರವಸೆಯನ್ನಿಡುತ್ತಿದ್ದರು. ಆದರೂ ತನ್ನನ್ನು ವೈಭವೀಕರಿಸುವುದನ್ನು ಮುಹಮ್ಮದ್(ﷺ)ರು ವಿರೋಧಿಸುತ್ತಿದ್ದರು ಮತ್ತು ದಿವ್ಯತೆಯನ್ನು ದೇವನಿಗೆ ಮಾತ್ರ ಸೀಮಿತಗೊಳಿಸಲು ಅವರು ಒತ್ತುಕೊಟ್ಟು ಬೋಧಿಸುತ್ತಿದ್ದರು. ಮುಹಮ್ಮದ್(ﷺ)ರ ಅನುಯಾಯಿಗಳಲ್ಲಿ ಒಬ್ಬರಾದ ಅನಸ್ ಹೇಳುವಂತೆ ಮುಹಮ್ಮದ್(ﷺ)ರಿಗಿಂತಲೂ ಹೆಚ್ಚಾಗಿ ಅವರ ಅನುಯಾಯಿಗಳು ಯಾರನ್ನೂ ಪ್ರೀತಿಸುತ್ತಿರಲಿಲ್ಲ, ಆದರೂ ಮುಹಮ್ಮದ್(ﷺ)ರು ಅವರ ಬಳಿಗೆ ಬಂದಾಗ ಅವರು ಎದ್ದು ನಿಲ್ಲುತ್ತಿರಲಿಲ್ಲ, ಯಾಕೆಂದರೆ ದೊಡ್ಡ ದೊಡ್ಡ ಜನರಿಗಾಗಿ ಎದ್ದು ನಿಲ್ಲುವಂತೆ ತನಗೆ ಕೂಡ ಎದ್ದು ನಿಲ್ಲುವುದನ್ನು ಮುಹಮ್ಮದ್(ﷺ)ರು ಅಸಹ್ಯಪಡುತ್ತಿದ್ದರು.[6]

ಮುಹಮ್ಮದ್(ﷺ)ರು ಪ್ರವಾದಿಯಾಗಿ ಮಕ್ಕಾದಲ್ಲಿ ವಾಸಿಸುತ್ತಿದ್ದ ಸಂದರ್ಭ, ಅವರು ಮತ್ತು ಅವರ ಅನುಯಾಯಿಗಳು ಹಿಂಸೆ, ದೌರ್ಜನ್ಯ ಹಾಗೂ ಕಿರುಕುಳದ ಯಾತನಾಮಯ ಜೀವನದೊಂದಿಗೆ ಬದುಕುತ್ತಿದ್ದಾಗ, ಶತ್ರುಗಳು ಅವರಿಗೆ ಒಂದು ವಿಶಿಷ್ಟ ಕೊಡುಗೆಯ ಅಹ್ವಾನ ನೀಡಿದರು. ಮಕ್ಕಾ ನಿವಾಸಿಗಳ ನಾಯಕರಲ್ಲೊಬ್ಬರಾದ ಉತ್ಬಾ ಅವರ ಬಳಿಗೆ ಬಂದು ಹೇಳಿದರು: "ನಿನಗೆ ಹಣದ ಅಗತ್ಯವಿದ್ದರೆ ನೀನು ನಮ್ಮ ಪೈಕಿ ಅತಿದೊಡ್ಡ ಶ್ರೀಮಂತನಾಗುವಷ್ಟು ನಾವು ನಿನಗೆ ಹಣವನ್ನು ನೀಡುವೆವು. ನಿನಗೆ ನಾಯಕತ್ವವು ಬೇಕಿದ್ದರೆ ನಾವು ನಿನ್ನನ್ನು ನಾಯಕನನ್ನಾಗಿ ಮಾಡುವೆವು ಮತ್ತು ನಿನ್ನ ಅಪ್ಪಣೆ ವಿನಾ ನಾವು ಏನನ್ನೂ ಮಾಡಲಾರೆವು. ನಿನಗೆ ಸಾಮ್ರಾಜ್ಯವು ಬೇಕಿದ್ದರೆ ನಾವು ನಿನ್ನನ್ನು ನಮ್ಮ ದೊರೆಯನ್ನಾಗಿ ಮಾಡುವೆವು..." ಇದಕ್ಕೆ ಬದಲಿಯಾಗಿ ಅವರು ಮುಹಮ್ಮದ್(ﷺ)ರ ಮುಂದಿಟ್ಟಿದ್ದು ಒಂದೇ ಒಂದು ಬೇಡಿಕೆಯಾಗಿತ್ತು. ಅಂದರೆ ಮುಹಮ್ಮದ್(ﷺ)ರು ಜನರನ್ನು ಇಸ್ಲಾಮಿನೆಡೆಗೆ ಮತ್ತು ಏಕದೇವಾರಾಧನೆಯೆಡೆಗೆ ಕರೆಯುವು

1. *ಮುಸ್ನದ್ ಅಹ್ಮದ್* #25662
2. *ಸಹೀಹುಲ್ ಬುಖಾರಿ* #676 ಮತ್ತು *ಮುಸ್ನದ್ ಅಹ್ಮದ್* #25517
3. *ಸಹೀಹುಲ್ ಬುಖಾರಿ* #676 ಮತ್ತು *ಮುಸ್ನದ್ ಅಹ್ಮದ್* #23706
4. *ಮುವತ್ತ ಮಾಲಿಕ್* #531
5. *ಸಹೀಹುಲ್ ಬುಖಾರಿ* #3034, *ಸಹೀಹ್ ಮುಸ್ಲಿಮ್* #1803 ಮತ್ತು *ಮುಸ್ನದ್ ಅಹ್ಮದ್* #18017
6. *ಮುಸ್ನದ್ ಅಹ್ಮದ್* #12117 ಮತ್ತು *ತಿರ್ಮಿದಿ* #2754

ದನ್ನು ನಿಲ್ಲಿಸಬೇಕು. ಭೌತಿಕ ಲಾಭಗಳನ್ನು ಬಯಸುವ ವ್ಯಕ್ತಿಗೆ ಈ ಕೊಡುಗೆಗಳು ಆಸೆಯನ್ನು ಹುಟ್ಟಿಸುವಂತಿಲ್ಲವೇ? ಈ ಕೊಡುಗೆಗಳನ್ನು ಮುಂದಿಟ್ಟಾಗ ಮುಹಮ್ಮದ್(ﷺ)ರು ಅರೆಮನಸ್ಸು ತಾಳಿದರೇ? ಇದಕ್ಕಿಂತಲೂ ಉತ್ತಮ ಕೊಡುಗೆಗಳನ್ನು ನೀಡುವುದಕ್ಕಾಗಿ ಮುಹಮ್ಮದ್(ﷺ)ರು ಅವರೊಂದಿಗೆ ಚೌಕಾಸಿ ಮಾಡಿದರೇ? ಇಲ್ಲ, ಮುಹಮ್ಮದ್(ﷺ)ರು ಅವರಿಗೆ ನೀಡಿದ ಉತ್ತರ ಇದಾಗಿತ್ತು: {**ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ.**} ನಂತರ ಅವರು ಉತ್ಬಾರಿಗೆ ಕುರ್‌ಆನಿನ 41ನೇ ಅಧ್ಯಾಯದ 1ರಿಂದ 38ರ ವರೆಗಿನ ಸೂಕ್ತಿಗಳನ್ನು ಓದಿಕೊಟ್ಟರು.[1] ಆ ಸೂಕ್ತಿಗಳಲ್ಲಿ ಸೇರಿದ ಕೆಲವು ಸೂಕ್ತಿಗಳು ಹೀಗಿವೆ:

> ﴾**ಇದು ಅವತೀರ್ಣಗೊಂಡಿರುವುದು ಪರಮ ದಯಾಮಯನೂ ಕರುಣಾನಿಧಿಯೂ ಆಗಿರುವವನ ವತಿಯಿಂದಾಗಿದೆ. ಸೂಕ್ತಿಗಳನ್ನು ವಿವರಿಸಲಾಗಿರುವ ಒಂದು ಗ್ರಂಥ. ಅರ್ಥಮಾಡುವ ಜನರಿಗಾಗಿ ಅರಬಿ ಭಾಷೆಯಲ್ಲಿ ಪಾರಾಯಣ ಮಾಡಲಾಗುವ (ಒಂದು ಗ್ರಂಥ). ಶುಭವಾರ್ತೆಯನ್ನು ತಿಳಿಸುವ ಮತ್ತು ಮುನ್ನೆಚ್ಚರಿಕೆ ನೀಡುವ (ಗ್ರಂಥ). ಆದರೆ ಅವರ ಪೈಕಿ ಹೆಚ್ಚಿನವರೂ ವಿಮುಖರಾದರು. ಅವರು ಆಲಿಸಲಾರರು.**﴿ (ಕುರ್‌ಆನ್ 41:2–4)

ಇನ್ನೊಂದು ಸಂದರ್ಭ, ಮುಹಮ್ಮದ್(ﷺ)ರ ಚಿಕ್ಕಪ್ಪ ಅಬೂತಾಲಿಬ್‌ರು ಬಂದು ಜನರನ್ನು ಇಸ್ಲಾಮಿನೆಡೆಗೆ ಕರೆಯುವುದನ್ನು ನಿಲ್ಲಿಸಬೇಕೆಂದು ಕೋರಿದಾಗ ಮುಹಮ್ಮದ್(ﷺ)ರು ಸ್ಪಷ್ಟವಾಗಿ ಮತ್ತು ಪ್ರಾಮಾಣಿಕವಾಗಿ ಉತ್ತರಿಸಿದರು: {**ಚಿಕ್ಕಪ್ಪಾ! ನಾನು ಅಲ್ಲಾಹನ ಮೇಲೆ ಪ್ರಮಾಣ ಮಾಡಿ ಹೇಳುತ್ತಿದ್ದೇನೆ. ನಾನು ಈ ಕಾರ್ಯವನ್ನು (ಇಸ್ಲಾಮಿನೆಡೆಗೆ ಜನರನ್ನು ಕರೆಯುವುದನ್ನು) ನಿಲ್ಲಿಸುವುದಕ್ಕೆ ಬದಲಿಯಾಗಿ ಅವರು ನನ್ನ ಬಲಗೈಯಲ್ಲಿ ಸೂರ್ಯನನ್ನು ಮತ್ತು ಎಡಗೈಯಲ್ಲಿ ಚಂದ್ರನನ್ನು ತಂದಿಟ್ಟರೂ ಅಲ್ಲಾಹು ಈ ಕಾರ್ಯವನ್ನು ಗೆಲ್ಲಿಸುವ ತನಕ ಅಥವಾ ನಾನು ಮರಣಹೊಂದುವ ತನಕ ನಾನು ಇದರಿಂದ ಹಿಂದೆ ಸರಿಯಲಾರೆ.**}[2]

ಮುಹಮ್ಮದ್(ﷺ)ರು ಮತ್ತು ಅವರ ಅನುಯಾಯಿಗಳು ಹದಿಮೂರು ವರ್ಷಗಳ ಕಾಲ ಅವಿಶ್ವಾಸಿಗಳಿಂದ ಕೇವಲ ಹಿಂಸೆ ಮಾತ್ರವಲ್ಲದೆ ಅನೇಕ ಬಾರಿ ಜೀವ ಬೆದರಿಕೆಯನ್ನು ಸಹ ಎದುರಿಸಿದ್ದರು. ಒಮ್ಮೆ ಶತ್ರುಗಳು ದೊಡ್ಡ ಬಂಡೆಗಲ್ಲೊಂದನ್ನು ಮುಹಮ್ಮದ್(ﷺ)ರ ತಲೆಯ ಮೇಲೆ ಹಾಕಲು ಯತ್ನಿಸಿದ್ದರು.[3] ಇನ್ನೊಮ್ಮೆ ಅವರ ಆಹಾರದಲ್ಲಿ ವಿಷ ಬೆರೆಸುವ ಮೂಲಕ ಅವರನ್ನು ಕೊಲ್ಲಲು ಹವಣಿಸಿದ್ದರು.[4] ತನ್ನ ಶತ್ರುಗಳ ಮೇಲೆ ಸಂಪೂರ್ಣ ಗೆಲುವನ್ನು ಪಡೆದ ಬಳಿಕವೂ ನೋವು ಮತ್ತು ತ್ಯಾಗಗಳಿಂದ ತುಂಬಿದ ಆ ಬದುಕು ಸಮರ್ಥಿಸುವುದಾದರೂ ಏನನ್ನು? ಯಶಸ್ಸು ಕೇವಲ ದೇವನ ಸಹಾಯದಿಂದ ಮಾತ್ರ ಲಭ್ಯವೇ ಹೊರತು ನನ್ನ ಸ್ವಂತದಿಂದಲ್ಲ ಎಂದು ಬದುಕಿನ ಅತಿಸಂತಸದ ಘಟ್ಟದಲ್ಲೂ ಅವರು ಘೋಷಿಸಿದಾಗ ಅವರ ವಿನಯತೆ ಮತ್ತು ಉದಾತ್ತತೆಯನ್ನು ವರ್ಣಿಸಲು ಪದಗಳು ಎಲ್ಲಿವೆ? ಇವೆಲ್ಲವೂ ಒಬ್ಬ ಅಧಿಕಾರದಾಹಿ ಅಥವಾ ಸ್ವಯಂ ಕೇಂದ್ರೀಕೃತ ವ್ಯಕ್ತಿಯ ಸ್ವಭಾವಗಳಾಗಿರಲು ಸಾಧ್ಯವೇ?

---

1. *ಅಸ್ಸೀರತು ನ್ನಬವಿಯ್ಯಃ,* ಇಬ್ನ್ ಹಿಶಾಮ್ 1/293–294
2. *ಅಸ್ಸೀರತು ನ್ನಬವಿಯ್ಯಃ,* ಇಬ್ನ್ ಹಿಶಾಮ್ 1/265–266
3. *ಅಸ್ಸೀರತು ನ್ನಬವಿಯ್ಯಃ,* ಇಬ್ನ್ ಹಿಶಾಮ್ 1/298–299
4. *ದಾರಿಮೀ* #68 ಮತ್ತು *ಅಬೂದಾವೂದ್* #4510

# (7) ಇಸ್ಲಾಮಿನ ಅಸಾಧಾರಣ ಬೆಳವಣಿಗೆ

ಈ ಅಧ್ಯಾಯದ ಕೊನೆಯಲ್ಲಿ, ಇಸ್ಲಾಮಿನ ಸತ್ಯತೆಯನ್ನು ಸೂಚಿಸುವ ಒಂದು ಪ್ರಮುಖ ವಿಷಯವನ್ನು ಹೇಳಬೇಕಾದುದು ಅವಶ್ಯಕವಾಗಿದೆ. ನಮಗೆಲ್ಲರಿಗೂ ತಿಳಿದಿರುವಂತೆ ಅಮೇರಿಕಾದಲ್ಲೂ, ಸಂಪೂರ್ಣ ವಿಶ್ವದಲ್ಲೂ ಇಸ್ಲಾಮ್ ಅತಿ ವೇಗವಾಗಿ ಬೆಳೆಯುತ್ತಿರುವ ಧರ್ಮವಾಗಿದೆ. ಈ ವಿದ್ಯಮಾನದ ಬಗ್ಗೆ ಕೆಲವೊಂದು ವೀಕ್ಷಣೆಗಳು ಹೀಗಿವೆ:

■ "ಇಸ್ಲಾಮ್ ಅಮೇರಿಕಾದಲ್ಲಿ ಅತಿ ವೇಗವಾಗಿ ಬೆಳೆಯುತ್ತಿರುವ ಧರ್ಮವಾಗಿದೆ. ನಮ್ಮ ಪೈಕಿ ಹಲವಾರು ಜನರಿಗೆ ಅದೊಂದು ಮಾರ್ಗದರ್ಶಿಯೂ, ದೃಢತೆಯ ಸ್ಥಂಭವೂ ಆಗಿದೆ..." (Hillary Rodham Clinton, *Los Angeles Times*)(1)

■ "ಮುಸ್ಲಿಮರು ಜಗತ್ತಿನಲ್ಲಿ ಅತಿ ವೇಗವಾಗಿ ಬೆಳೆಯುತ್ತಿರುವ ಪಂಗಡವಾಗಿದ್ದಾರೆ..." (The Population Reference Bureau, *USA Today*)(2)

■ "...ಇಸ್ಲಾಮ್ ದೇಶದಲ್ಲಿ ಅತಿ ವೇಗವಾಗಿ ಬೆಳೆಯುತ್ತಿರುವ ಧರ್ಮವಾಗಿದೆ." (Geraldine Baum; *Newsday* Religion Writer, *Newsday*)(3)

■ "ಇಸ್ಲಾಮ್ ಅಮೇರಿಕಾದಲ್ಲಿ ಅತಿ ವೇಗವಾಗಿ ಬೆಳೆಯುತ್ತಿರುವ ಧರ್ಮವಾಗಿದೆ." (Ari L. Goldman, *New York Times*)(4)

ಇಸ್ಲಾಮ್ ಸತ್ಯವಾಗಿಯೂ ದೇವನಿಂದಿರುವ ಧರ್ಮವಾಗಿದೆಯೆಂದು ಈ ವಿದ್ಯಮಾನಗಳು ಸೂಚಿಸುತ್ತವೆ. ಇಷ್ಟೊಂದು ಸಂಖ್ಯೆಯ ಅಮೇರಿಕನ್ನರು ಹಾಗೂ ಜಗತ್ತಿನ ವಿವಿಧ ಭಾಗಗಳ ಜನರು ಸೂಕ್ಷ್ಮ ಪರಿಶೀಲನೆ ಹಾಗೂ ಆಳವಾದ ಅಧ್ಯಯನ ಮಾಡದೆ ಇಸ್ಲಾಮನ್ನು ಸತ್ಯವೆಂದು ಸ್ವೀಕರಿಸಿದರು ಎಂದು ಭಾವಿಸುವುದು ಮೂರ್ಖತನವಾಗಿದೆ. ಇವರೆಲ್ಲರೂ ಜಗತ್ತಿನ ವಿವಿಧ ದೇಶಗಳಿಂದ, ವಿವಿಧ ವರ್ಗಗಳಿಂದ, ವಿವಿಧ ಜನಾಂಗಗಳಿಂದ, ವಿವಿಧ ಜೀವನಪದ್ಧತಿಗಳಿಂದ ಬಂದವರಾಗಿದ್ದಾರೆ. ಇವರಲ್ಲಿ ವಿಜ್ಞಾನಿಗಳೂ, ಪ್ರೊಫೆಸ್ಸರ್‌ಗಳೂ, ತತ್ವಜ್ಞಾನಿಗಳೂ, ಪತ್ರಕರ್ತರೂ, ರಾಜಕಾರಣಿಗಳೂ, ನಟರೂ, ಕ್ರೀಡಾಪಟುಗಳೂ ಇದ್ದಾರೆ.

ಕುರ್‌ಆನ್ ದೇವನ ವಚನಗಳಾಗಿವೆ, ಮುಹಮ್ಮದ್(ﷺ)ರು ಸತ್ಯವಾಗಿಯೂ ದೇವನ ಪ್ರವಾದಿಯಾಗಿದ್ದಾರೆ ಮತ್ತು ಇಸ್ಲಾಮ್ ದೇವನ ಸತ್ಯಧರ್ಮವಾಗಿದೆ ಎಂಬುದಕ್ಕೆ ಪುರಾವೆಯಾಗಿ ಈ ಅಧ್ಯಾಯದಲ್ಲಿ ನೀಡಲಾದ ವಿಷಯಗಳು ಕೆಲವು ಮಾತ್ರವಾಗಿವೆ.

ಕುರ್‌ಆನ್ ಸತ್ಯವೆಂಬುದಕ್ಕೆ ಕೆಲವು ಪುರಾವೆಗಳು

---

1. Larry B. Stammer, Times Religion Writer, "First Lady Breaks Ground With Muslims," *Los Angeles Times,* Home Edition, Metro Section, Part B, May 31, 1996, p. 3.
2. Timothy Kenny, "Elsewhere in the World," *USA Today,* Final Edition, News Section, February 17, 1989, p. 4A.
3. Geraldine Baum, "For Love of Allah," *Newsday,* Nassau and Suffolk Edition, Part II, March 7, 1989, p. 4.
4. Ari L. Goldman, "Mainstream Islam Rapidly Embraced By Black Americans," *New York Times,* Late City Final Edition, February 21, 1989, p. 1.

ಅಧ್ಯಾಯ 2

# ಇಸ್ಲಾಮ್‌ನ ಕೆಲವು ಪ್ರಯೋಜನಗಳು

ವ್ಯಕ್ತಿ ಹಾಗೂ ಸಮಾಜಕ್ಕೆ ಇಸ್ಲಾಮ್ ಅನೇಕ ಪ್ರಯೋಜನಗಳನ್ನು ಒದಗಿಸುತ್ತದೆ. ಒಬ್ಬ ವ್ಯಕ್ತಿ ಇಸ್ಲಾಮಿನ ಮೂಲಕ ಪಡೆಯುವ ಕೆಲವು ಪ್ರಯೋಜನಗಳನ್ನು ಈ ಅಧ್ಯಾಯವು ವಿವರಿಸುತ್ತದೆ.

## (1) ಶಾಶ್ವತ ಸ್ವರ್ಗಕ್ಕಿರುವ ಬಾಗಿಲು

ದೇವನು ಕುರ್‌ಆನಿನಲ್ಲಿ ಹೇಳುತ್ತಾನೆ:

> ﴿(ಓ ಪ್ರವಾದಿಯವರೇ!) **ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರಾರೋ ಅವರಿಗೆ ತಳಭಾಗದಿಂದ ನದಿಗಳು ಹರಿಯುವ ಸ್ವರ್ಗೋದ್ಯಾನಗಳಿವೆ ಎಂಬ ಶುಭವಾರ್ತೆಯನ್ನು ತಿಳಿಸಿರಿ...**﴾ (ಕುರ್‌ಆನ್ 2:25)

ದೇವನು ಇನ್ನೊಂದು ಕಡೆ ಹೇಳುತ್ತಾನೆ:

> ﴿**ನಿಮ್ಮ ಪ್ರಭುವಿನ ವತಿಯ ಪಾಪಮುಕ್ತಿಯೆಡೆಗೆ ಮತ್ತು ಸ್ವರ್ಗದೆಡೆಗೆ ಧಾವಿಸಿ ಬನ್ನಿರಿ. ಅದರ ವಿಸ್ತಾರವು ಆಕಾಶಗಳ ಮತ್ತು ಭೂಮಿಯ ವಿಸ್ತಾರದಷ್ಟಿದೆ. ಅಲ್ಲಾಹುವಿನಲ್ಲಿ ಮತ್ತು ಅವನ ಸಂದೇಶವಾಹಕರಲ್ಲಿ ವಿಶ್ವಾಸವಿಟ್ಟವರಿಗಾಗಿ ಅದನ್ನು ಸಜ್ಜೀಕರಿಸಲಾಗಿದೆ...**﴾ (ಕುರ್‌ಆನ್ 57:21)

ಪ್ರವಾದಿ ಮುಹಮ್ಮದ್(ﷺ)ರು ನಮಗೆ ತಿಳಿಸಿಕೊಟ್ಟಂತೆ, ಸ್ವರ್ಗವಾಸಿಗಳ ಪೈಕಿ ಅತಿಕೆಳಗಿನ ಪದವಿಯಲ್ಲಿರುವವರಿಗೆ ಈ ಜಗತ್ತಿನಲ್ಲಿರುವುದರ ಹತ್ತು ಪಟ್ಟು ಸಿಗುವುದು[1] ಮತ್ತು ಆತ ಅಥವಾ ಆಕೆ ಏನೆಲ್ಲ ಬಯಸುವರೋ ಅವೆಲ್ಲದರ ಹತ್ತು ಪಟ್ಟು ಅವರಿಗೆ ಸಿಗುವುದು.[2] ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {**ಸ್ವರ್ಗದಲ್ಲಿ ಒಂದು ಪಾದಕ್ಕೆ ಸಮಾನವಾಗುವಷ್ಟು ಸ್ಥಳವು ಸಿಗುವುದು ಈ ಜಗತ್ತು ಮತ್ತು ಅದರಲ್ಲಿರುವುದೆಲ್ಲವೂ ಸಿಗುವುದಕ್ಕಿಂತಲೂ ಶ್ರೇಷ್ಠವಾಗಿದೆ.**}[3] ಅವರು ಹೇಳಿದರು: {**ಸ್ವರ್ಗದಲ್ಲಿ ಕಣ್ಣುಗಳು ನೋಡಿರದಂತಹ, ಕಿವಿಗಳು ಕೇಳಿರದಂತಹ ಮತ್ತು ಮನಸ್ಸು ಊಹಿಸಿರದಂತಹ ವಸ್ತುಗಳಿವೆ.**}[4] ಅವರು ಹೇಳಿದರು: {**ಭೂಮಿಯಲ್ಲಿ ಅತ್ಯಂತ ದೀನ ಸ್ಥಿತಿಯಲ್ಲಿದ್ದ ಸ್ವರ್ಗವಾಸಿಯನ್ನು ಒಮ್ಮೆ ಸ್ವರ್ಗದಲ್ಲಿ ಅದ್ದಿ ತೆಗೆಯಲಾಗುವುದು. ನಂತರ ಅವನೊಂದಿಗೆ ಕೇಳಲಾಗುವುದು: "ಮನುಷ್ಯ ಪುತ್ರನೇ, ನೀನೆಂದಾದರೂ ದೀನ ಸ್ಥಿತಿಯನ್ನು ಎದುರಿಸಿರುವೆಯಾ?**

---

1. *ಸಹೀಹುಲ್ ಬುಖಾರಿ* #6571 ಮತ್ತು *ಸಹೀಹ್ ಮುಸ್ಲಿಮ್* #186
2. *ಸಹೀಹ್ ಮುಸ್ಲಿಮ್* #188 ಮತ್ತು *ಮುಸ್ನದ್ ಅಹ್ಮದ್* #10832
3. *ಸಹೀಹುಲ್ ಬುಖಾರಿ* #6568 ಮತ್ತು *ಮುಸ್ನದ್ ಅಹ್ಮದ್* #13368
4. *ಸಹೀಹ್ ಮುಸ್ಲಿಮ್* #2825 ಮತ್ತು *ಮುಸ್ನದ್ ಅಹ್ಮದ್* #8609

**ನೀನೆಂದಾದರೂ ದಾರಿದ್ರ್ಯವನ್ನು ಅನುಭವಿಸಿರುವೆಯಾ?" ಆತ ಹೇಳುವನು: "ಇಲ್ಲ, ಅಲ್ಲಾಹನ ಮೇಲಾಣೆ, ಓ ಪ್ರಭೂ! ನಾನೆಂದೂ ದೀನ ಸ್ಥಿತಿಯನ್ನು ಎದುರಿಸಿಲ್ಲ, ನಾನೆಂದೂ ದಾರಿದ್ರ್ಯವನ್ನು ಅನುಭವಿಸಿಲ್ಲ."**}[1]

ನೀವು ಸ್ವರ್ಗವನ್ನು ಪ್ರವೇಶಿಸಿದರೆ, ನೀವು ಕಾಯಿಲೆ, ನೋವು, ದುಃಖ, ಮರಣ ಇತ್ಯಾದಿ ಯಾವುದೂ ಇಲ್ಲದ ಸುಖವಾದ ಜೀವನವನ್ನು ಪಡೆಯುವಿರಿ. ಮೇಲಾಗಿ, ದೇವನು ನಿಮ್ಮ ಬಗ್ಗೆ ಸಂತೃಪ್ತನಾಗಿರುವನು ಮತ್ತು ನೀವು ಅಲ್ಲಿ ಶಾಶ್ವತವಾಗಿ ವಾಸಿಸುವಿರಿ. ದೇವನು ಕುರ್‌ಆನಿನಲ್ಲಿ ಹೇಳುತ್ತಾನೆ:

> **﴿ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರನ್ನು ನಾವು ತಳಭಾಗದಿಂದ ನದಿಗಳು ಹರಿಯುತ್ತಿರುವ ಸ್ವರ್ಗೋದ್ಯಾನಗಳಲ್ಲಿ ಪ್ರವೇಶಗೊಳಿಸುವೆವು. ಅವರದರಲ್ಲಿ ಎಂದೆಂದಿಗೂ ಶಾಶ್ವತವಾಗಿರುವರು...﴾** (ಕುರ್‌ಆನ್ 4:57)

## (2) ನರಕಾಗ್ನಿಯಿಂದ ಮುಕ್ತಿ

ದೇವನು ಕುರ್‌ಆನಿನಲ್ಲಿ ಹೇಳುತ್ತಾನೆ:

> **﴿ಅವಿಶ್ವಾಸಿಗಳು ಮತ್ತು ಅವಿಶ್ವಾಸಿಯಾಗಿಯೇ ಮರಣಹೊಂದಿದವರು ಯಾರೋ ಅವರ ಪೈಕಿ ಒಬ್ಬನು ಭೂಮಿ ತುಂಬಾ ಚಿನ್ನವನ್ನು ಪ್ರಾಯಶ್ಚಿತ್ತವಾಗಿ ನೀಡಿದರೂ ಅವನಿಂದ ಅದನ್ನು ಸ್ವೀಕರಿಸಲಾಗದು. ಅವರಿಗೆ ಯಾತನಾಮಯವಾದ ಶಿಕ್ಷೆಯಿರುವುದು. ಅವರಿಗೆ ಸಹಾಯಕರಾಗಿ ಯಾರೂ ಇರಲಾರರು.﴾** (ಕುರ್‌ಆನ್ 3:91)

ಆದ್ದರಿಂದ ನಮ್ಮ ಈ ಜೀವನವು ಸ್ವರ್ಗವನ್ನು ಗಳಿಸಲು ಮತ್ತು ನರಕಾಗ್ನಿಯಿಂದ ಪಾರಾಗಲು ಇರುವ ಏಕೈಕ ಅವಕಾಶವಾಗಿದೆ. ಯಾಕೆಂದರೆ ಯಾರಾದರೂ ಅವಿಶ್ವಾಸದೊಂದಿಗೆ ಮರಣಹೊಂದಿದರೆ ವಿಶ್ವಾಸವಿಡುವುದಕ್ಕಾಗಿ ಈ ಭೂಮಿಗೆ ಮರಳಿ ಬರುವ ಇನ್ನೊಂದು ಅವಕಾಶವು ಅವನಿಗಿರಲಾರದು. ತೀರ್ಪು ನೀಡುವ ದಿನದಂದು ಅವಿಶ್ವಾಸಿಗಳು ಹೇಳುವ ಮಾತನ್ನು ದೇವನು ಕುರ್‌ಆನಿನಲ್ಲಿ ಉಲ್ಲೇಖಿಸಿರುವನು:

> **﴿ಅವರನ್ನು ನರಕದಲ್ಲಿ ನಿಲ್ಲಿಸಲಾಗುವ ದೃಶ್ಯವನ್ನು ತಾವು ನೋಡಿರುತ್ತಿದ್ದರೆ! ಆಗ ಅವರು ಹೇಳುವರು: 'ನಮ್ಮನ್ನು (ಇಹಲೋಕಕ್ಕೆ) ಮರಳಿ ಕಳುಹಿಸಲಾಗುತ್ತಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಹಾಗಿರುತ್ತಿದ್ದರೆ ನಾವು ನಮ್ಮ ಪ್ರಭುವಿನ ದೃಷ್ಟಾಂತಗಳನ್ನು ನಿಷೇಧಿಸದವರೂ, ಸತ್ಯವಿಶ್ವಾಸಿಗಳೊಂದಿಗೆ ಸೇರಿದವರೂ ಆಗುತ್ತಿದ್ದೆವು.'﴾** (ಕುರ್‌ಆನ್ 6:27)

ಆದರೆ ಯಾರಿಗೂ ಈ ಎರಡನೇ ಅವಕಾಶವು ಇರಲಾರದು.

---

1. *ಸಹೀಹ್ ಮುಸ್ಲಿಮ್* #2807 ಮತ್ತು *ಮುಸ್ನದ್ ಅಹ್ಮದ್* #12699

ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {**ಭೂಮಿಯಲ್ಲಿ ಅತ್ಯಂತ ಸುಖವಾಗಿದ್ದ ನರಕವಾಸಿಯನ್ನು ತೀರ್ಪು ನೀಡುವ ದಿನದಂದು ನರಕಾಗ್ನಿಯಲ್ಲಿ ಒಮ್ಮೆ ಅದ್ದಿ ತೆಗೆಯಲಾಗುವುದು. ನಂತರ ಅವನೊಂದಿಗೆ ಕೇಳಲಾಗುವುದು: "ಮನುಷ್ಯ ಪುತ್ರನೇ, ನೀನೆಂದಾದರೂ ಸುಖವನ್ನು ಕಂಡಿರುವೆಯಾ? ನೀನೆಂದಾದರೂ ಅನುಗ್ರಹವನ್ನು ಅನುಭವಿಸಿರುವೆಯಾ?" ಆತ ಹೇಳುವನು: "ಇಲ್ಲ, ಅಲ್ಲಾಹನ ಮೇಲಾಣೆ, ಓ ಪ್ರಭೂ!"**}[1]

## (3) ನೈಜ ಸಂತೋಷ ಮತ್ತು ಆಂತರಿಕ ಶಾಂತಿ



ಈ ಜಗತ್ತಿನ ಸೃಷ್ಟಿಕರ್ತನೂ, ಪರಿಪಾಲಕನೂ ಆಗಿರುವ ದೇವನ ಆಜ್ಞೆಗಳಿಗೆ ಶರಣಾಗತಿ ಪ್ರಕಟಿಸುವ ಮೂಲಕ ನೈಜ ಸಂತೋಷ ಮತ್ತು ಶಾಂತಿಯನ್ನು ಪಡೆಯಲು ಸಾಧ್ಯ. ದೇವನು ಕುರ್‌ಆನಿನಲ್ಲಿ ಹೇಳುತ್ತಾನೆ:

> ﴾**ಅರಿಯಿರಿ! ಹೃದಯಗಳು ಶಾಂತವಾಗುವುದು ಅಲ್ಲಾಹುವಿನ ಸ್ಮರಣೆಯಿಂದಾಗಿದೆ.**﴿ (ಕುರ್‌ಆನ್ 13:28)

ಆದರೆ ಯಾರು ಕುರ್‌ಆನ್‌ನಿಂದ ದೂರ ಸಾಗುವನೋ ಅವನಿಗೆ ಈ ಲೋಕದಲ್ಲಿ ಇಕ್ಕಟ್ಟಿನ ಜೀವನವಿರುವುದು. ದೇವನು ಹೇಳುತ್ತಾನೆ:

> ﴾**ಯಾರು ನನ್ನ ಸಂದೇಶವನ್ನು ಕಡೆಗಣಿಸಿ ವಿಮುಖನಾಗುವನೋ**[2] **ಖಂಡಿತವಾಗಿಯೂ ಅವನಿಗಿರುವುದು ಇಕ್ಕಟ್ಟಾದ ಜೀವನವಾಗಿದೆ. ಪುನರುತ್ಥಾನ ದಿನದಂದು ಅವನನ್ನು ನಾವು ಕುರುಡನಾಗಿ ಒಟ್ಟುಗೂಡಿಸುವೆವು.**﴿ (ಕುರ್‌ಆನ್ 20:124)

ತಾವು ಆಶಿಸುವ ಎಲ್ಲ ಭೌತಿಕ ಸವಲತ್ತುಗಳಿದ್ದೂ ಸಹ ಯಾಕೆ ಕೆಲವರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ ಎಂಬುದನ್ನು ಇದು ವಿವರಿಸುತ್ತದೆ. ಉದಾಹರಣೆಗೆ, ಕ್ಯಾಟ್ ಸ್ಟೀವನ್ಸ್ (ಈಗ ಯೂಸುಫ್ ಇಸ್ಲಾಮ್)ರನ್ನು ನೋಡಿ. ಪ್ರಖ್ಯಾತ ಪಾಪ್ ಗಾಯಕರಾಗಿದ್ದ ಅವರು ಕೆಲವೊಮ್ಮೆ ಒಂದು ರಾತ್ರಿಯಲ್ಲಿ 150,000 ಡಾಲರ್‌ಗಳನ್ನು ಸಂಪಾದಿಸುತ್ತಿದ್ದರು. ಇಸ್ಲಾಮಿಗೆ ಮತಾಂತರಗೊಂಡ ಬಳಿಕ ಅವರು ನಿಜವಾದ ಸಂತೋಷ ಹಾಗೂ ಶಾಂತಿಯನ್ನು ಕಂಡರು. ಇದನ್ನು ಭೌತಿಕ ಯಶಸ್ಸಿನಲ್ಲಿ ಕಾಣಲು ಅವರಿಗೆ ಸಾಧ್ಯವಾಗಿರಲಿಲ್ಲ.[3]

---

1. *ಸಹೀಹ್ ಮುಸ್ಲಿಮ್* #2807 ಮತ್ತು *ಮುಸ್ನದ್ ಅಹ್ಮದ್* #12699
2. ಅಂದರೆ ಅವನು ಕುರ್‌ಆನಿನಲ್ಲಿ ವಿಶ್ವಾಸವಿಡುವುದಾಗಲಿ ಅದರ ಆಜ್ಞೆಗಳನ್ನು ಪಾಲಿಸುವುದಾಗಲಿ ಮಾಡಲಿಲ್ಲ.
3. ಕ್ಯಾಟ್ ಸ್ಟೀವನ್ಸ್ (ಯೂಸುಫ್ ಇಸ್ಲಾಮ್)ರೊಂದಿಗೆ ಅವರು ಇಸ್ಲಾಮಿಗೆ ಮತಾಂತರಗೊಂಡ ಬಳಿಕ ಅವರ ಅನಿಸಿಕೆಗಳನ್ನು ತಿಳಿಯಬೇಕಾದರೆ ಈ ವಿಳಾಸವನ್ನು ಸಂಪರ್ಕಿಸಿರಿ: 2 Digswell Street, London N7 8JX, United Kingdom.

# (4) ಗತ ಪಾಪಗಳಿಗೆ ಕ್ಷಮೆ

ಒಬ್ಬ ವ್ಯಕ್ತಿ ಇಸ್ಲಾಮಿಗೆ ಮತಾಂತರಗೊಂಡ ತಕ್ಷಣ ದೇವನು ಅವನ ಸರ್ವ ಗತ ಪಾಪಗಳನ್ನು ಹಾಗೂ ದುಷ್ಕರ್ಮಗಳನ್ನು ಮನ್ನಿಸುತ್ತಾನೆ. **ಒಮ್ಮೆ ಅಮ್ರ್ ಎಂಬ ಹೆಸರಿನ ಒಬ್ಬ ವ್ಯಕ್ತಿ ಪ್ರವಾದಿ ಮುಹಮ್ಮದ್(ﷺ)ರ ಬಳಿಗೆ ಬಂದು ಹೇಳಿದರು: "ತಮ್ಮ ಬಲಗೈಯನ್ನು ಚಾಚಿರಿ, ನಾನು ತಮಗೆ ನಿಷ್ಠೆಯ ಪ್ರತಿಜ್ಞೆಯನ್ನು ಮಾಡುವೆನು." ಪ್ರವಾದಿ ಮುಹಮ್ಮದ್(ﷺ)ರು ತಮ್ಮ ಬಲಗೈಯನ್ನು ಚಾಚಿದರು. ಅಮ್ರ್ ತಮ್ಮ ಕೈಯನ್ನು ಹಿಂದಕ್ಕೆಳೆದರು. ಪ್ರವಾದಿ ಮುಹಮ್ಮದ್(ﷺ)ರು ಕೇಳಿದರು: {ಅಮ್ರ್, ನಿನಗೇನಾಯಿತು?} ಅಮ್ರ್ ಉತ್ತರಿಸಿದರು: "ನನಗೊಂದು ಶರ್ತವಿದೆ." ಪ್ರವಾದಿ ಮುಹಮ್ಮದ್(ﷺ)ರು ಕೇಳಿದರು: {ನೀನು ಮುಂದಿಡುವ ಶರ್ತವೇನು?} ಅಮ್ರ್ ಹೇಳಿದರು: "ದೇವನು ನನ್ನ ಪಾಪಗಳನ್ನು ಮನ್ನಿಸಬೇಕು." ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {ನಿನಗೆ ಗೊತ್ತಿಲ್ಲವೇ, ಇಸ್ಲಾಮಿಗೆ ಮತಾಂತರಗೊಂಡ ತಕ್ಷಣ ನಿನ್ನ ಪಾಪಗಳೆಲ್ಲವೂ ಮನ್ನಿಸಲ್ಪಡುತ್ತವೆಯೆಂದು?}**[(1)]

ಪ್ರವಾದಿ ಮುಹಮ್ಮದ್(ﷺ)ರ ಈ ಕೆಳಗಿನ ವಚನದ ಪ್ರಕಾರ ಇಸ್ಲಾಮಿಗೆ ಮತಾಂತರಗೊಂಡ ಬಳಿಕ ಒಬ್ಬ ವ್ಯಕ್ತಿಯ ಸತ್ಕರ್ಮ ಹಾಗೂ ದುಷ್ಕರ್ಮಗಳಿಗೆ ಅನುಗುಣವಾಗಿ ಅವನಿಗೆ ಪ್ರತಿಫಲ ನೀಡಲಾಗುವುದು: **{ಅತ್ಯುನ್ನತನೂ, ಅನುಗ್ರಹಪೂರ್ಣನೂ ಆಗಿರುವ ನಿಮ್ಮ ಪ್ರಭು ಅಪಾರ ಕರುಣೆಯುಳ್ಳವನಾಗಿದ್ದಾನೆ. ನಿಮ್ಮಲ್ಲಿ ಯಾರಾದರೂ ಒಂದು ಸತ್ಕರ್ಮವನ್ನು ಮಾಡಲು ಉದ್ದೇಶಿಸಿ, ಅದನ್ನು ಮಾಡದೆ ಹೋದರೆ ಅವನಿಗೆ ಒಂದು ಪುಣ್ಯವನ್ನು ದಾಖಲಿಸಲಾಗುವುದು. ಅವನು ಅದನ್ನು ಮಾಡಿದರೆ ಹತ್ತರಿಂದ ಏಳು ನೂರು ಅಥವಾ ಅದಕ್ಕಿಂತಲೂ ಹೆಚ್ಚು ಪುಣ್ಯವನ್ನು ದಾಖಲಿಸಲಾಗುವುದು. ನಿಮ್ಮಲ್ಲಿ ಯಾರಾದರೂ ಒಂದು ದುಷ್ಕರ್ಮವನ್ನು ಮಾಡಲು ಉದ್ದೇಶಿಸಿ, ಅದನ್ನು ಮಾಡದೆ ಹೋದರೆ ಅವನಿಗೆ ಒಂದು ಪುಣ್ಯವನ್ನು ದಾಖಲಿಸಲಾಗುವುದು. ಅವನು ಅದನ್ನು ಮಾಡಿದರೆ ಒಂದು ಪಾಪವನ್ನು ಅವನಿಗೆ ದಾಖಲಿಸಲಾಗುವುದು ಅಥವಾ ದೇವನು ಅದನ್ನು ಅಳಿಸಿಹಾಕಲೂಬಹುದು.}**[(2)]

1. *ಸಹೀಹ್ ಮುಸ್ಲಿಮ್* #121 ಮತ್ತು *ಮುಸ್ನದ್ ಅಹ್ಮದ್* #17357
2. *ಸಹೀಹ್ ಮುಸ್ಲಿಮ್* #131 ಮತ್ತು *ಮುಸ್ನದ್ ಅಹ್ಮದ್* #2515

ಅಧ್ಯಾಯ 3

# ಇಸ್ಲಾಮ್‌ನ ಬಗ್ಗೆ ಕೆಲವು ಮಾಹಿತಿಗಳು

## ಇಸ್ಲಾಮ್ ಎಂದರೇನು?

ದೇವನನ್ನು ಅಂಗೀಕರಿಸುವುದು ಮತ್ತು ಅವನು ತನ್ನ ಕೊನೆಯ ಪ್ರವಾದಿಯಾದ ಮುಹಮ್ಮದ್(ﷺ)ರಿಗೆ ಅವತೀರ್ಣಗೊಳಿಸಿದ ಬೋಧನೆಗಳನ್ನು ಅನುಸರಿಸುವುದು ಇಸ್ಲಾಮ್ ಧರ್ಮವಾಗಿದೆ.

## ಕೆಲವು ಮೂಲಭೂತ ಇಸ್ಲಾಮೀ ವಿಶ್ವಾಸಗಳು

### 1) ಅಲ್ಲಾಹನಲ್ಲಿರುವ ವಿಶ್ವಾಸ

ಮುಸ್ಲಿಮರು ಏಕೈಕ, ಅದ್ವಿತೀಯ, ಸರಿಸಾಟಿಯಿಲ್ಲದ ದೇವನಲ್ಲಿ ವಿಶ್ವಾಸವಿಡುತ್ತಾರೆ. ಅವನಿಗೆ ಸಂತತಿಯಾಗಲಿ, ಪಾಲುದಾರರಾಗಲಿ ಇಲ್ಲ. ಆರಾಧಿಸಲ್ಪಡುವ ಅರ್ಹತೆಯು ಅವನ ಹೊರತು ಯಾರಿಗೂ ಇಲ್ಲ. ಅವನು ಸತ್ಯದೇವನು. ಅವನ ಹೊರತಾಗಿರುವ ದೇವರೆಲ್ಲರೂ ಮಿಥ್ಯರು. ಅವನಿಗೆ ಅತ್ಯುನ್ನತವಾದ ನಾಮಗಳೂ, ಸಮಗ್ರ ವಿಶೇಷಣಗಳೂ ಇವೆ. ಅವನ ದಿವ್ಯತೆಯಲ್ಲಾಗಲಿ, ವಿಶೇಷಣಗಳಲ್ಲಾಗಲಿ ಯಾರಿಗೂ ಪಾಲಿಲ್ಲ. ದೇವನು ಕುರ್‌ಆನಿನಲ್ಲಿ ತನ್ನನ್ನು ತಾನೇ ವಿವರಿಸುತ್ತಾ ಹೇಳುತ್ತಾನೆ:

> ﴾(ಓ ಪ್ರವಾದಿಯವರೇ!) **ಹೇಳಿರಿ: 'ಅವನು ಅಲ್ಲಾಹು! ಏಕಮೇವನಾಗಿರುವನು. ಅಲ್ಲಾಹು ಸರ್ವರಿಗೂ ಆಶ್ರಯದಾತನಾಗಿರುವನು. ಅವನು** (ಯಾರಿಗೂ) **ಜನ್ಮವನ್ನು ನೀಡಿಲ್ಲ. ಅವನು** (ಯಾರದೇ ಸಂತತಿಯಾಗಿ) **ಜನಿಸಿದವನೂ ಅಲ್ಲ. ಅವನಿಗೆ ಸರಿಸಾಟಿಯಾಗಿ ಯಾರೂ ಇಲ್ಲ'.**﴿ (ಕುರ್‌ಆನ್ 112:1–4)

ಅವನ ಹೊರತು ಯಾರೊಂದಿಗೂ ಪ್ರಾರ್ಥಿಸಬಾರದು, ಯಾರಿಗೂ ಹರಕೆ ಸಲ್ಲಿಸಬಾರದು, ಅಥವಾ ಆರಾಧನೆಯ ಯಾವುದೇ ಅಂಶವನ್ನು ಅವನ ಹೊರತು ಯಾರಿಗೂ ಅರ್ಪಿಸಬಾರದು.



ಅರಬಿ ಲಿಪಿಯಲ್ಲಿ ಬರೆಯಲಾದ ಕುರ್‌ಆನಿನ 112ನೇ ಅಧ್ಯಾಯ

ದೇವನೊಬ್ಬನೇ ಸರ್ವಶಕ್ತನು, ಸೃಷ್ಟಿಕರ್ತನು, ಸಾರ್ವಭೌಮನು ಮತ್ತು ಜಗತ್ತಿನಲ್ಲಿರುವ ಎಲ್ಲ ವಸ್ತುಗಳ ಪರಿಪಾಲಕನು. ಅವನು ಎಲ್ಲ ಕಾರ್ಯಗಳನ್ನೂ ನಿಯಂತ್ರಿಸುತ್ತಾನೆ. ಅವನಿಗೆ ಅವನ ಸೃಷ್ಟಿಗಳ ಪೈಕಿ ಯಾರ ಅಗತ್ಯವೂ ಇಲ್ಲ, ಆದರೆ ಅವನ ಸೃಷ್ಟಿಗಳೆಲ್ಲರೂ ಅವರ ಅಗತ್ಯಗಳಿಗಾಗಿ ಅವನ ಮೇಲೆ ಅವಲಂಬಿತರಾಗಿದ್ದಾರೆ. ಅವನು ಎಲ್ಲವನ್ನೂ ಆಲಿಸುವವನು, ಎಲ್ಲವನ್ನೂ ಕಾಣುವವನು ಮತ್ತು ಎಲ್ಲವನ್ನೂ ಅರಿಯುವವನಾಗಿದ್ದಾನೆ. ಅವನ ಜ್ಞಾನವು ಸಮಗ್ರವಾದ ರೀತಿಯಲ್ಲಿ ಬಹಿರಂಗವಾಗಿರುವ ಹಾಗೂ ರಹಸ್ಯವಾಗಿರುವ, ಗೋಚರವಾಗಿರುವ ಹಾಗೂ ಅಗೋಚರವಾಗಿರುವ ಎಲ್ಲವನ್ನೂ ಆವರಿಸಿದೆ. ಏನು ಸಂಭವಿಸಿದೆ, ಏನು ಸಂಭವಿಸುತ್ತಿದೆ ಮತ್ತು ಏನು ಸಂಭವಿಸಲಿದೆ ಎಂಬುದರ ಅರಿವು ಅವನಿಗಿದೆ. ಅವನು ಇಚ್ಛಿಸುವ ವಿನಾ ಈ ಜಗತ್ತಿನಲ್ಲಿ ಏನೂ ಸಂಭವಿಸದು. ಅವನು ಏನನ್ನು ಇಚ್ಛಿಸುತ್ತಾನೋ ಅದು ಸಂಭವಿಸುವುದು ಮತ್ತು ಏನನ್ನು ಇಚ್ಛಿಸುವುದಿಲ್ಲವೋ ಅದು ಎಂದೂ ಸಂಭವಿಸದು. ಅವನ ಇಚ್ಛೆಯು ಅವನ ಸೃಷ್ಟಿಗಳೆಲ್ಲರ ಇಚ್ಛೆಗಿಂತಲೂ ಮೇಲಿದೆ. ಅವನಿಗೆ ಸರ್ವ ವಿಷಯಗಳಲ್ಲೂ ಸಾಮರ್ಥ್ಯವಿದೆ. ಅವನು ಪರಮ ದಯಾಮಯನೂ, ಅಪಾರ ಕರುಣೆಯುಳ್ಳವನೂ ಆಗಿದ್ದಾನೆ. ಪ್ರವಾದಿ ಮುಹಮ್ಮದ್(ﷺ)ರ ಒಂದು ವಚನದಲ್ಲಿರುವಂತೆ ತಾಯಿಗೆ ತನ್ನ ಕಂದನ ಮೇಲಿರುವ ಕರುಣೆಗಿಂತಲೂ ಹೆಚ್ಚು ಕರುಣೆಯು ದೇವನಿಗೆ ಅವನ ಸೃಷ್ಟಿಗಳ ಮೇಲಿದೆ.(1) ದೇವನು ಅನ್ಯಾಯ ಹಾಗೂ ದಬ್ಬಾಳಿಕೆ ಮಾಡುವವನಲ್ಲ. ತನ್ನ ಪ್ರತಿಯೊಂದು ಕಾರ್ಯಗಳಲ್ಲೂ, ವಿಧಿಗಳಲ್ಲೂ ಅವನು ಅತ್ಯಂತ ಯುಕ್ತಿಪೂರ್ಣನಾಗಿದ್ದಾನೆ. ಯಾರಿಗಾದರೂ ದೇವನಿಂದ ಏನನ್ನಾದರೂ ಬೇಡಬೇಕಾದರೆ ಅವನು ಅಥವಾ ಅವಳು ಯಾವುದೇ ಮಧ್ಯವರ್ತಿಗಳನ್ನು ಅವಲಂಬಿಸದೆ ನೇರವಾಗಿ ಅವನೊಂದಿಗೆ ಬೇಡಬಹುದಾಗಿದೆ.

ದೇವನು ಯೇಸುಕ್ರಿಸ್ತನಲ್ಲ, ಯೇಸುಕ್ರಿಸ್ತರು ದೇವನೂ ಅಲ್ಲ.(2) ಯೇಸುಕ್ರಿಸ್ತರು ಇದನ್ನು ಸ್ಪಷ್ಟವಾಗಿ ನಿರಾಕರಿಸಿದ್ದಾರೆ. ದೇವನು ಕುರ್‌ಆನಿನಲ್ಲಿ ಹೇಳುತ್ತಾನೆ:

> **﴿'ಮರ್ಯಮ್‌ರ ಮಗನಾದ ಮಸೀಹನೇ** (ಯೇಸುಕ್ರಿಸ್ತರೇ) **ಅಲ್ಲಾಹು' ಎಂದು ಹೇಳಿದವರು ಖಂಡಿತವಾಗಿಯೂ ಅವಿಶ್ವಾಸಿಗಳಾಗಿರುವರು. ಆದರೆ ಮಸೀಹರು** (ಯೇಸುಕ್ರಿಸ್ತರು) **ಹೇಳಿರುವುದೇನೆಂದರೆ: 'ಓ ಇಸ್ರಾಈಲ್ ಸಂತತಿಗಳೇ! ನೀವು ನನ್ನ ಮತ್ತು ನಿಮ್ಮ ಪ್ರಭುವಾದ ಅಲ್ಲಾಹುವನ್ನು ಆರಾಧಿಸಿರಿ. ಯಾರು ಅಲ್ಲಾಹುವಿನೊಂದಿಗೆ ಸಹಭಾಗಿತ್ವ** (ಪಾಲುದಾರಿಕೆ) **ಮಾಡುವನೋ ಖಂಡಿತವಾಗಿಯೂ ಅಲ್ಲಾಹು ಅವನಿಗೆ ಸ್ವರ್ಗವನ್ನು ನಿಷಿದ್ಧಗೊಳಿಸಿರುವನು ಮತ್ತು ನರಕಾಗ್ನಿಯು ಅವನ**

---

1. *ಸಹೀಹ್ ಮುಸ್ಲಿಮ್* #2754 ಮತ್ತು *ಸಹೀಹುಲ್ ಬುಖಾರಿ* #5999

2. ಜೂನ್ 25, 1984ರಲ್ಲಿ ಅಸೋಸಿಯೇಟೆಡ್ ಪ್ರೆಸ್, ಲಂಡನ್ ವರದಿ ಮಾಡಿದಂತೆ ದೃಶ್ಯ ಮಾಧ್ಯಮವೊಂದು ನಡೆಸಿದ ಸಮೀಕ್ಷೆಯ ಪ್ರಕಾರ ಆಂಗ್ಲಿಕನ್ ಬಿಷಪರ ಪೈಕಿ ಬಹುಸಂಖ್ಯಾತರ ಅಭಿಪ್ರಾಯವು ಹೀಗಿದೆ: "ಯೇಸುಕ್ರಿಸ್ತರು ದೇವರಾಗಿದ್ದಾರೆ ಎಂದು ನಂಬುವುದು ಕ್ರೈಸ್ತರ ಮೇಲೆ ನಿರ್ಬಂಧವಿಲ್ಲ." ಇಂಗ್ಲಂಡಿನ 39 ಬಿಷಪರ ಪೈಕಿ 31 ಬಿಷಪರು ಈ ಸಮೀಕ್ಷೆಯಲ್ಲಿ ಪಾಲ್ಗೊಂಡಿದ್ದರು. ಈ ವರದಿಯು ಮುಂದುವರಿದು ಹೇಳುವಂತೆ ಯೇಸುಕ್ರಿಸ್ತರನ್ನು "ದೇವನ ಪರಮೋನ್ನತ ಪ್ರತಿನಿಧಿ" ಎಂದು ಪರಿಗಣಿಸಿದರೆ ಸಾಕಾಗುವುದು ಎಂದು 31 ಬಿಷಪರ ಪೈಕಿ 19 ಬಿಷಪರು ಅಭಿಪ್ರಾಯ ಪಟ್ಟಿದ್ದಾರೆ. ಈ ಸಮೀಕ್ಷೆಯನ್ನು ಲಂಡನ್‌ನ ವೀಕೆಂಡ್ ಟೆಲಿವಿಶನ್ ತನ್ನ 'ಕ್ರೀಡೋ' ಎಂಬ ಧಾರ್ಮಿಕ ಕಾರ್ಯಕ್ರಮಕ್ಕಾಗಿ ನಡೆಸಿತ್ತು.

**ವಾಸಸ್ಥಳವಾಗಿರುವುದು. ಅಕ್ರಮಿಗಳಿಗೆ[1] ಸಹಾಯಕರಾಗಿ ಯಾರೂ ಇರಲಾರರು.'**﴾ (ಕುರ್‌ಆನ್ 5:72)

ದೇವನು ಮೂವರಲ್ಲಿ ಒಬ್ಬನಲ್ಲ. ದೇವನು ಕುರ್‌ಆನಿನಲ್ಲಿ ಹೇಳುತ್ತಾನೆ:

﴿**'ಅಲ್ಲಾಹು ಮೂವರಲ್ಲಿ ಒಬ್ಬನಾಗಿರುವನು' ಎಂದು ಹೇಳಿದವರು ಖಂಡಿತವಾಗಿಯೂ ಅವಿಶ್ವಾಸಿಗಳಾಗಿರುವರು. ಏಕಮೇವ ಆರಾಧ್ಯನ ಹೊರತು ಅನ್ಯ ಆರಾಧ್ಯರಿಲ್ಲ. ಅವರು ಹಾಗೆ ಹೇಳುವುದನ್ನು ನಿಲ್ಲಿಸದಿದ್ದರೆ ಅವರ ಪೈಕಿ ಅವಿಶ್ವಾಸವಿಟ್ಟವರನ್ನು ಖಂಡಿತವಾಗಿಯೂ ಯಾತನಾಮಯ ಶಿಕ್ಷೆಯು ಸ್ಪರ್ಶಿಸಲಿರುವುದು. ಅವರು ಅಲ್ಲಾಹುವಿನೆಡೆಗೆ ಪಶ್ಚಾತ್ತಾಪದೊಂದಿಗೆ ಮರಳುವುದಾಗಲಿ, ಅವನೊಂದಿಗೆ ಪಾಪಮುಕ್ತಿ ಬೇಡುವುದಾಗಲಿ ಮಾಡಲಾರರೇ? ಅಲ್ಲಾಹು ಅತ್ಯಧಿಕ ಕ್ಷಮಿಸುವವನೂ ಅಪಾರ ಕರುಣೆಯುಳ್ಳವನೂ ಆಗಿರುವನು. ಮರ್ಯಮ್‌ರ ಮಗ ಮಸೀಹರು (ಯೇಸುಕ್ರಿಸ್ತರು) ಒಬ್ಬ ಸಂದೇಶವಾಹಕರಾಗಿದ್ದರೇ ವಿನಾ ಇನ್ನಾರೂ ಆಗಿರಲಿಲ್ಲ...**﴾ (ಕುರ್‌ಆನ್ 5:73–75)

ಸೃಷ್ಟಿಯ ಏಳನೇ ದಿನ ದೇವನು ವಿಶ್ರಾಂತಿ ಪಡೆದನು, ಅವನು ದೇವದೂತರ (angels) ಪೈಕಿ ಒಬ್ಬರೊಂದಿಗೆ ಕುಸ್ತಿ ಮಾಡಿದನು, ಅವನು ಮಾನವಕುಲದ ಮೇಲಿರುವ ಅಸೂಯೆಯಿಂದ ಸಂಚು ಹೂಡಿದನು, ಅವನು ಮನುಷ್ಯರೂಪದಲ್ಲಿ ಅವತಾರ ಹೊಂದುವನು ಇತ್ಯಾದಿಗಳನ್ನು ಇಸ್ಲಾಮ್ ನಿರಾಕರಿಸುತ್ತದೆ. ಇವೆಲ್ಲವನ್ನೂ ಇಸ್ಲಾಮ್ ದೇವನಿಂದನೆಯೆಂದು ಪರಿಗಣಿಸುತ್ತದೆ. ದೇವನು ಅತ್ಯುನ್ನತನು. ಮನುಷ್ಯರು ಆರೋಪಿಸುವ ಆರೋಪಗಳಿಂದೆಲ್ಲ ಅವನು ಪರಿಶುದ್ಧನು. ಅವನಿಗೆ ಯಾವುದೇ ನ್ಯೂನತೆಗಳಿಲ್ಲ. ಅವನಿಗೆ ದಣಿವೆಂಬುದಿಲ್ಲ. ತೂಕಡಿಕೆಯಾಗಲಿ ನಿದ್ದೆಯಾಗಲಿ ಅವನನ್ನು ವಶಪಡಿಸದು.

*ಅಲ್ಲಾಹು* ಎಂಬ ಅರಬಿ ಪದದ ಅರ್ಥ ದೇವನು (ಅಂದರೆ ಸಮಸ್ತ ವಿಶ್ವವನ್ನು ಸೃಷ್ಟಿಸಿ ಪರಿಪಾಲಿಸುತ್ತಿರುವ ಏಕೈಕ ಸತ್ಯದೇವನು) ಎಂದಾಗಿದೆ. ಅರಬಿ ಮಾತನಾಡುವ ಮುಸ್ಲಿಮರು ಮತ್ತು ಕ್ರೈಸ್ತರು ಕೂಡ ದೇವನನ್ನು *ಅಲ್ಲಾಹು* ಎಂದು ಕರೆಯುತ್ತಾರೆ. ಈ ಹೆಸರು ಏಕೈಕ ಸತ್ಯದೇವನಿಗಲ್ಲದೆ ಬೇರಾರಿಗೂ ಬಳಸಲಾಗುವುದಿಲ್ಲ. ಕುರ್‌ಆನಿನಲ್ಲಿ *ಅಲ್ಲಾಹು* ಎಂಬ ಪದವು 2150 ಬಾರಿ ಬಳಸಲಾಗಿದೆ. ಅರಬಿ ಭಾಷೆಯೊಂದಿಗೆ ತದ್ರೂಪವನ್ನು ಹೊಂದಿರುವ ಮತ್ತು ಯೇಸು ಮಾತನಾಡಿದ[2] ಭಾಷೆಯಾಗಿರುವ ಅರಾಮೈಕ್ ಭಾಷೆಯಲ್ಲಿ ಕೂಡ ದೇವನನ್ನು *ಅಲ್ಲಾಹು* ಎಂದು ಕರೆಯಲಾಗುತ್ತದೆ.

## 2) ಮಲಕ್‌ಗಳಲ್ಲಿರುವ ವಿಶ್ವಾಸ

ಮಲಕ್‌ಗಳ (angels) ಅಸ್ತಿತ್ವದಲ್ಲಿ ಮುಸ್ಲಿಮರು ವಿಶ್ವಾಸವಿಡುತ್ತಾರೆ. ಅವರು ಗೌರವಾನ್ವಿತ ಸೃಷ್ಟಿಗಳಾಗಿರುವರು. ಮಲಕ್‌ಗಳು ದೇವನನ್ನು ಮಾತ್ರ ಆರಾಧಿಸುತ್ತಾರೆ, ಅವನನ್ನು ಅನುಸರಿಸುತ್ತಾರೆ ಮತ್ತು ಅವನ ಆಜ್ಞಾಪಾಲನೆ ಮಾಡುತ್ತಾರೆ. ಗೇಬ್ರಿಯಲ್ (ಜಿಬ್ರೀಲ್) ಮಲಕ್‌ಗಳ ಪೈಕಿ ಒಬ್ಬರು. ಅವರು ಮುಹಮ್ಮದ್(ﷺ)ರಿಗೆ ಕುರ್‌ಆನನ್ನು ತಂದುಕೊಟ್ಟರು.

1. ಅಕ್ರಮಿಗಳಲ್ಲಿ ಬಹುದೇವವಿಶ್ವಾಸಿಗಳೂ ಸೇರುತ್ತಾರೆ.
2. *NIV Compact Dictionary of the Bible*, Douglas, p. 42.

## 3) ಅಲ್ಲಾಹು ಅವತೀರ್ಣಗೊಳಿಸಿದ ಗ್ರಂಥಗಳಲ್ಲಿರುವ ವಿಶ್ವಾಸ

ಮನುಕುಲಕ್ಕೆ ಒಂದು ಪುರಾವೆ ಹಾಗೂ ಮಾರ್ಗದರ್ಶನವಾಗಿ ದೇವನು ತನ್ನ ಸಂದೇಶವಾಹಕರಿಗೆ ಗ್ರಂಥಗಳನ್ನು ಅವತೀರ್ಣಗೊಳಿಸಿದನೆಂದು ಮುಸ್ಲಿಮರು ವಿಶ್ವಾಸವಿಡುತ್ತಾರೆ. ಪ್ರವಾದಿ ಮುಹಮ್ಮದ್(ﷺ)ರಿಗೆ ದೇವನು ಅವತೀರ್ಣಗೊಳಿಸಿದ ಕುರ್‌ಆನ್ ಇವುಗಳ ಪೈಕಿ ಒಂದಾಗಿದೆ. ಕುರ್‌ಆನನ್ನು ಪ್ರಕ್ಷಿಪ್ತತೆ ಹಾಗೂ ಬದಲಾವಣೆಗಳಿಂದ ಸಂರಕ್ಷಿಸುವೆನೆಂದು ದೇವನು ಭರವಸೆ ನೀಡಿರುವನು. ದೇವನು ಹೇಳುತ್ತಾನೆ:

> **﴿ಖಂಡಿತವಾಗಿಯೂ ಈ ಉಪದೇಶವನ್ನು ಅವತೀರ್ಣಗೊಳಿಸಿದವರು ನಾವಾಗಿರುವೆವು. ಖಂಡಿತವಾಗಿಯೂ ಇದನ್ನು ನಾವು ಸಂರಕ್ಷಿಸುವೆವು.﴾** (ಕುರ್‌ಆನ್ 15:9)

## 4) ಅಲ್ಲಾಹನ ಪ್ರವಾದಿಗಳು ಮತ್ತು ಸಂದೇಶವಾಹಕರಲ್ಲಿರುವ ವಿಶ್ವಾಸ

ಆದಮ್‌ರಿಂದ ತೊಡಗಿ, ನೋಹ, ಅಬ್ರಹಾಮ್, ಇಷ್ಮಾಯೇಲ್, ಇಸಾಕ್, ಯಾಕೋಬ್, ಮೋಶೆ, ಯೇಸು (ಅವರೆಲ್ಲರ ಮೇಲೂ ಶಾಂತಿಯಿರಲಿ) ಮೊದಲಾದ ದೇವನ ಪ್ರವಾದಿಗಳು ಹಾಗೂ ಸಂದೇಶವಾಹಕರಲ್ಲಿ ಮುಸ್ಲಿಮರು ವಿಶ್ವಾಸವಿಡುತ್ತಾರೆ. ಆದರೆ ದೇವನ ಕಟ್ಟಕಡೆಯ ಸಂದೇಶ, ಶಾಶ್ವತ ಸಂದೇಶದ ಮರು ದೃಢೀಕರಣವು ಪ್ರವಾದಿ ಮುಹಮ್ಮದ್(ﷺ)ರಿಗೆ ಅವತೀರ್ಣಗೊಂಡಿದೆ. ಮುಹಮ್ಮದ್(ﷺ)ರವರು ದೇವನ ಕೊನೆಯ ಸಂದೇಶವಾಹಕರೆಂದು ಮುಸ್ಲಿಮರು ವಿಶ್ವಾಸವಿಡುತ್ತಾರೆ. ದೇವನು ಹೇಳುತ್ತಾನೆ:

> **﴿ಮುಹಮ್ಮದ್ ನಿಮ್ಮ ಪುರುಷರ ಪೈಕಿ ಯಾರ ತಂದೆಯೂ ಅಲ್ಲ. ಆದರೆ ಅವರು ಅಲ್ಲಾಹುವಿನ ಸಂದೇಶವಾಹಕರಾಗಿರುವರು ಮತ್ತು ಪ್ರವಾದಿಗಳ ಪೈಕಿ ಕಟ್ಟಕಡೆಯವರಾಗಿರುವರು...﴾** (ಕುರ್‌ಆನ್ 33:40)

ಪ್ರವಾದಿಗಳು ಮತ್ತು ಸಂದೇಶವಾಹಕರೆಲ್ಲರೂ ಮನುಷ್ಯ ಸೃಷ್ಟಿಗಳು ಮತ್ತು ಅವರಿಗೆ ಯಾವುದೇ ದೈವಿಕ ಗುಣಗಳಿಲ್ಲವೆಂದು ಮುಸ್ಲಿಮರು ವಿಶ್ವಾಸವಿಡುತ್ತಾರೆ.

## 5) ವಿಚಾರಣೆಯ ದಿನದಲ್ಲಿರುವ ವಿಶ್ವಾಸ

ಮುಸ್ಲಿಮರು ವಿಚಾರಣೆಯ ದಿನದಲ್ಲಿ (ಪುನರುತ್ಥಾನ ದಿನದಲ್ಲಿ) ವಿಶ್ವಾಸವಿಡುತ್ತಾರೆ. ಅಂದು ಮನುಷ್ಯರ ವಿಶ್ವಾಸ ಮತ್ತು ಕರ್ಮಗಳಿಗೆ ಅನುಸಾರವಾಗಿ ಅವರನ್ನು ವಿಚಾರಣೆ ಮಾಡುವುದಕ್ಕಾಗಿ ಪುನರುತ್ಥಾನಗೊಳಿಸಲಾಗುವುದು.

## 6) *ಅಲ್ ಕದರ್* ನಲ್ಲಿರುವ ವಿಶ್ವಾಸ

ಮುಸ್ಲಿಮರು *ಅಲ್ ಕದರ್* ನಲ್ಲಿ ಅಂದರೆ ದೈವಿಕ ವಿಧಿಯಲ್ಲಿ ವಿಶ್ವಾಸವಿಡುತ್ತಾರೆ. ಆದರೆ ದೈವಿಕ ವಿಧಿಯಲ್ಲಿರುವ ವಿಶ್ವಾಸವು ಮನುಷ್ಯನಿಗೆ ಯಾವುದೇ ಸ್ವಾತಂತ್ರ್ಯವಿಲ್ಲ ಎಂದರ್ಥವಲ್ಲ. ಬದಲಾಗಿ ಮುಸ್ಲಿಮರ ವಿಶ್ವಾಸ ಪ್ರಕಾರ ದೇವನು ಮನುಷ್ಯನಿಗೆ ಸ್ವಾತಂತ್ರ್ಯವನ್ನು ಕೊಟ್ಟಿದ್ದಾನೆ. ಅಂದರೆ ಒಳಿತು ಮತ್ತು ಕೆಡುಕುಗಳನ್ನು ಆರಿಸುವ ಸ್ವಾತಂತ್ರ್ಯ ಮನುಷ್ಯನಿಗೆ ನೀಡಿದ್ದಾನೆ. ತಮ್ಮ ಆಯ್ಕೆಗೆ ಮನುಷ್ಯರೇ ಸ್ವತಃ ಹೊಣೆಗಾರರಾಗಿದ್ದಾರೆ.

ದೈವಿಕ ವಿಧಿಯಲ್ಲಿರುವ ವಿಶ್ವಾಸ ನಾಲ್ಕು ವಿಧ ವಿಶ್ವಾಸಗಳನ್ನು ಹೊಂದಿದೆ. 1) ದೇವನಿಗೆ

ಎಲ್ಲವೂ ತಿಳಿದಿದೆ. ಏನು ಸಂಭವಿಸಿದೆ ಮತ್ತು ಏನು ಸಂಭವಿಸಲಿದೆಯೆಂಬುದು ದೇವನಿಗೆ ತಿಳಿದಿದೆ. 2) ಏನೆಲ್ಲ ಸಂಭವಿಸಿದೆಯೋ ಮತ್ತು ಏನೆಲ್ಲ ಸಂಭವಿಸಲಿದೆಯೋ ಅವೆಲ್ಲವನ್ನೂ ದೇವನು ದಾಖಲಿಸಿಟ್ಟಿದ್ದಾನೆ. 3) ಏನೆಲ್ಲ ಸಂಭವಿಸಬೇಕೆಂದು ದೇವನು ಇಚ್ಛಿಸುತ್ತಾನೋ ಅವೆಲ್ಲವೂ ಸಂಭವಿಸುತ್ತದೆ ಮತ್ತು ಏನೆಲ್ಲ ಸಂಭವಿಸಬಾರದೆಂದು ದೇವನು ಇಚ್ಛಿಸುತ್ತಾನೋ ಅವೊಂದೂ ಸಂಭವಿಸಲಾರದು. 4) ದೇವನು ಎಲ್ಲ ವಸ್ತುಗಳ ಸೃಷ್ಟಿಕರ್ತನು.

## ಕುರ್‌ಆನ್‌ನ ಹೊರತು ಬೇರೆ ದೈವಿಕ ಮೂಲಗಳಿವೆಯೇ?

ಹೌದು. *ಸುನ್ನಃ* (ಪ್ರವಾದಿ ಮುಹಮ್ಮದ್(ﷺ)ರ ಮಾತು, ಪ್ರವೃತ್ತಿ ಮತ್ತು ಅಂಗೀಕಾರಗಳು) ಇಸ್ಲಾಮಿನ ಎರಡನೆ ಆಧಾರಪ್ರಮಾಣವಾಗಿದೆ. ಮುಹಮ್ಮದ್(ﷺ)ರು ಏನು ಹೇಳಿದರು, ಏನು ಮಾಡಿದರು ಮತ್ತು ಏನನ್ನು ಅಂಗೀಕರಿಸಿದರು ಮೊದಲಾದವುಗಳು ಅವರ ಅನುಯಾಯಿಗಳ ಮೂಲಕ ವಿಶ್ವಾಸಯೋಗ್ಯವಾಗಿ ಬಂದ ವರದಿಗಳಾದ ಹದೀಸ್‌ಗಳನ್ನು *ಸುನ್ನಃ* ಒಳಗೊಂಡಿದೆ. *ಸುನ್ನಃ* ದಲ್ಲಿ ವಿಶ್ವಾಸವಿಡುವುದು ಇಸ್ಲಾಮಿನ ಮೂಲಭೂತ ವಿಶ್ವಾಸದಲ್ಲಿ ಸೇರಿದ್ದಾಗಿದೆ.

## ಪ್ರವಾದಿ ಮುಹಮ್ಮದ್(ﷺ)ರ ಕೆಲವು ವಚನಗಳು

■ **{ವಿಶ್ವಾಸಿಗಳು ಪರಸ್ಪರ ತೋರಿಸುವ ಪ್ರೀತಿ, ಕರುಣೆ ಹಾಗೂ ವಾತ್ಸಲ್ಯಗಳಲ್ಲಿ ಒಂದೇ ಶರೀರದಂತಿದ್ದಾರೆ. ಆ ಶರೀರದ ಯಾವುದಾದರೂ ಭಾಗವು ಕಾಯಿಲೆ ಬಿದ್ದರೆ, ಸಂಪೂರ್ಣ ಶರೀರವು ನಿದ್ದೆಗೆಟ್ಟು, ಜ್ವರದ ಮೂಲಕ ಆ ನೋವನ್ನು ಹಂಚಿಕೊಳ್ಳುತ್ತದೆ.}**[1]

■ **{ವಿಶ್ವಾಸಿಗಳ ಪೈಕಿ ವಿಶ್ವಾಸದಲ್ಲಿ ಅತ್ಯಂತ ಸಂಪೂರ್ಣರಾಗಿರುವವರು ಯಾರೆಂದರೆ ಚಾರಿತ್ರ್ಯದಲ್ಲಿ ಅತ್ಯುತ್ತಮರಾಗಿರುವವರು. ಅವರ ಪೈಕಿ ಅತ್ಯುತ್ತಮರು ಯಾರೆಂದರೆ ತಮ್ಮ ಪತ್ನಿಯೊಂದಿಗೆ ಅತ್ಯುತ್ತಮವಾಗಿ ವರ್ತಿಸುವವರು.}**[2]

■ **{ತನಗಾಗಿ ಇಷ್ಟಪಡುವುದನ್ನು ತನ್ನ ಸಹೋದರನಿಗಾಗಿ ಇಷ್ಟಪಡುವ ತನಕ ನಿಮ್ಮಲ್ಲಿ ಯಾರೂ ವಿಶ್ವಾಸಿಗಳಾಗಲಾರರು.}**[3]

■ **{ಕರುಣೆ ತೋರಿಸುವವರ ಮೇಲೆ ಪರಮ ದಯಾಮಯನು ಕರುಣೆ ತೋರಿಸುವನು. ಭೂಮಿಯಲ್ಲಿರುವವರ ಮೇಲೆ ಕರುಣೆ ತೋರಿಸಿರಿ. ಆಕಾಶದಲ್ಲಿರುವವನು (ದೇವನು) ನಿಮ್ಮ ಮೇಲೆ ಕರುಣೆ ತೋರಿಸುವನು.}**[4]

■ **{ನಿನ್ನ ಸಹೋದರನ ಮುಖ ನೋಡಿ ಮಂದಹಾಸ ಬೀರುವುದು ದಾನಧರ್ಮವಾಗಿದೆ.}**[5]

■ **{ಒಂದು ಒಳ್ಳೆಯ ಮಾತು ದಾನಧರ್ಮವಾಗಿದೆ.}**[6]

1. *ಸಹೀಹ್ ಮುಸ್ಲಿಮ್* #2586 ಮತ್ತು *ಸಹೀಹುಲ್ ಬುಖಾರಿ* #6011
2. *ಮುಸ್ನದ್ ಅಹ್ಮದ್* #7354 ಮತ್ತು *ತಿರ್ಮಿದಿ* #1162
3. *ಸಹೀಹುಲ್ ಬುಖಾರಿ* #13 ಮತ್ತು *ಸಹೀಹ್ ಮುಸ್ಲಿಮ್* #45
4. *ತಿರ್ಮಿದಿ* #1924 ಮತ್ತು *ಅಬೂದಾವೂದ್* #4941
5. *ತಿರ್ಮಿದಿ* #1956
6. *ಸಹೀಹ್ ಮುಸ್ಲಿಮ್* #1009 ಮತ್ತು *ಸಹೀಹುಲ್ ಬುಖಾರಿ* #2989

■ {ಯಾರು ಅಲ್ಲಾಹನಲ್ಲಿ ಮತ್ತು ಅಂತ್ಯದಿನದಲ್ಲಿ ವಿಶ್ವಾಸವಿಡುತ್ತಾನೋ ಅವನು ತನ್ನ ನೆರೆಮನೆಯವನಿಗೆ ಒಳಿತನ್ನು ಮಾಡಲಿ.}[1]

■ {ಅಲ್ಲಾಹು ನಿಮ್ಮ ರೂಪವನ್ನಾಗಲಿ, ಸಂಪತ್ತನ್ನಾಗಲಿ ನೋಡುವುದಿಲ್ಲ, ಆದರೆ ಅವನು ನಿಮ್ಮ ಹೃದಯಗಳನ್ನು ಮತ್ತು ಕರ್ಮಗಳನ್ನು ನೋಡುತ್ತಾನೆ.}[2]

■ {ಕಾರ್ಮಿಕನ ಬೆವರು ಆರುವ ಮೊದಲೇ ಅವನ ವೇತನವನ್ನು ಕೊಟ್ಟುಬಿಡಿರಿ.}[3]

■ {ಒಬ್ಬ ವ್ಯಕ್ತಿ ನಡೆದು ಹೋಗುತ್ತಿದ್ದಾಗ ಅವನಿಗೆ ದಾಹವುಂಟಾಯಿತು. ಒಂದು ಬಾವಿಯನ್ನು ತಲುಪಿದಾಗ ಆತ ಅದರೊಳಗೆ ಇಳಿದು ದಾಹವನ್ನು ತಣಿಸಿ ಮೇಲೆ ಬಂದನು. ಆಗ ಒಂದು ನಾಯಿ ದಾಹದಿಂದ ಬಳಲುತ್ತಾ, ನಾಲಗೆಯನ್ನು ಹೊರಚಾಚಿ ಮಣ್ಣು ನೆಕ್ಕುವುದನ್ನು ಆತ ಕಂಡನು. ಆತ ಹೇಳಿದನು: “ನನಗೆ ದಾಹವಾದಂತೆಯೇ ಈ ನಾಯಿಗೂ ದಾಹವಾಗುತ್ತಿದೆ.” ಅವನು ಪುನಃ ಆ ಬಾವಿಯೊಳಗೆ ಇಳಿದು, ತನ್ನ ಬೂಟಿನಲ್ಲಿ ನೀರನ್ನು ತುಂಬಿಸಿ, ಆ ನಾಯಿಗೆ ಕುಡಿಸಿದನು. ಅವನ ಈ ಪ್ರವೃತ್ತಿಯನ್ನು ಕಂಡ ದೇವನು ಅವನ ಪಾಪಗಳನ್ನು ಕ್ಷಮಿಸಿದನು.} ಅನುಯಾಯಿಗಳು ಕೇಳಿದರು: “ಅಲ್ಲಾಹನ ಸಂದೇಶವಾಹಕರೇ! ಪ್ರಾಣಿಗಳಿಗೆ ಕರುಣೆ ತೋರಿಸಿದರೆ ನಮಗೆ ಪ್ರತಿಫಲ ಸಿಗುವುದೇ?” ಮುಹಮ್ಮದ್(ﷺ)ರು ಹೇಳಿದರು: {ಹೌದು! ಜೀವವಿರುವ ಯಾವುದೇ ವಸ್ತುವಿಗೆ ಕರುಣೆ ತೋರಿಸಿದರೂ ನಿಮಗೆ ಪ್ರತಿಫಲ ಸಿಗುವುದು.}[4]

## ವಿಚಾರಣೆಯ ದಿನದ ಬಗ್ಗೆ ಇಸ್ಲಾಮ್ ಏನೆನ್ನುತ್ತದೆ?

ಇಹಲೋಕ ಜೀವನವು ಪರಲೋಕ ಜೀವನಕ್ಕಿರುವ ಒಂದು ಪರೀಕ್ಷೆಯಾಗಿದೆಯೆಂದು ಕ್ರೈಸ್ತರಂತೆ ಮುಸ್ಲಿಮರೂ ವಿಶ್ವಾಸವಿಡುತ್ತಾರೆ. ಈ ಜೀವನವು ಪ್ರತಿಯೊಬ್ಬ ವ್ಯಕ್ತಿಗೂ ಅವನ ಮರಣಾನಂತರ ಜೀವನಕ್ಕಿರುವ ಒಂದು ಪರೀಕ್ಷೆಯಾಗಿದೆ. ಒಂದು ದಿನ ಈ ಸಂಪೂರ್ಣ ವಿಶ್ವವು ನಾಶವಾಗುವುದು ಮತ್ತು ದೈವಿಕ ವಿಚಾರಣೆಗಾಗಿ ಸರ್ವ ಮನುಷ್ಯರನ್ನೂ ಪುನರುತ್ಥಾನಗೊಳಿಸಲಾಗುವುದು. ಆ ದಿನವು ಶಾಶ್ವತವಾದ ಪರಲೋಕ ಜೀವನದ ಮೊದಲ ದಿನವಾಗಿರುವುದು. ಅದೇ ವಿಚಾರಣೆಯ ದಿನ. ಆ ದಿನದಂದು ಸರ್ವ ಮನುಷ್ಯರಿಗೆ ಅವರ ವಿಶ್ವಾಸ ಮತ್ತು ಕರ್ಮಗಳಿಗೆ ಅನುಸಾರವಾಗಿ ದೇವನು ಪ್ರತಿಫಲ ನೀಡುವನು. **“ಅಲ್ಲಾಹನ ಹೊರತು ಅನ್ಯ ದೇವರಿಲ್ಲ ಮತ್ತು ಮುಹಮ್ಮದ್ ಅಲ್ಲಾಹನ ಸಂದೇಶವಾಹಕರಾಗಿರುವರು”** ಎಂಬ ವಿಶ್ವಾಸದೊಂದಿಗೆ ಮುಸ್ಲಿಮರಾಗಿ ಮರಣಹೊಂದಿದವರಿಗೆ ಆ ದಿನದಂದು ಪ್ರತಿಫಲ ನೀಡಲಾಗುವುದು ಮತ್ತು ಶಾಶ್ವತವಾದ ಸ್ವರ್ಗಕ್ಕೆ ಕಳುಹಿಸಲಾಗುವುದು. ದೇವನು ಕುರ್‌ಆನಿನಲ್ಲಿ ಹೇಳುತ್ತಾನೆ:

---

1. *ಸಹೀಹ್ ಮುಸ್ಲಿಮ್* #48 ಮತ್ತು *ಸಹೀಹುಲ್ ಬುಖಾರಿ* #6019
2. *ಸಹೀಹ್ ಮುಸ್ಲಿಮ್* #2564
3. *ಇಬ್ನ್ ಮಾಜ* #2443
4. *ಸಹೀಹ್ ಮುಸ್ಲಿಮ್* #2244 ಮತ್ತು *ಸಹೀಹುಲ್ ಬುಖಾರಿ* #2466

**﴿ವಿಶ್ವಾಸವಿಟ್ಟವರು ಮತ್ತು ಸತ್ಕರ್ಮವೆಸಗಿದವರು ಯಾರೋ ಅವರು ಸ್ವರ್ಗವಾಸಿಗಳಾಗಿರುವರು. ಅವರು ಅದರಲ್ಲಿ ಶಾಶ್ವತವಾಗಿ ವಾಸಿಸುವರು.﴾** (ಕುರ್‌ಆನ್ 2:82)

ಆದರೆ ಯಾರು **"ಅಲ್ಲಾಹನ ಹೊರತು ಅನ್ಯ ದೇವರಿಲ್ಲ ಮತ್ತು ಮುಹಮ್ಮದ್ ಅಲ್ಲಾಹನ ಸಂದೇಶವಾಹಕರಾಗಿರುವರು"** ಎಂದು ವಿಶ್ವಾಸವಿಡದೆ ಮುಸ್ಲಿಮೇತರರಾಗಿ ಮರಣಹೊಂದುತ್ತಾರೋ ಅವರು ಸ್ವರ್ಗವನ್ನು ಶಾಶ್ವತವಾಗಿ ಕಳೆದುಕೊಳ್ಳುವರು. ಅವರನ್ನು ನರಕಾಗ್ನಿಗೆ ಕಳುಹಿಸಲಾಗುವುದು. ದೇವನು ಹೇಳುತ್ತಾನೆ:

**﴿ಯಾರಾದರೂ ಇಸ್ಲಾಮ್‌ಗೆ ಹೊರತಾಗಿರುವುದನ್ನು ಧರ್ಮವಾಗಿ ಅರಸುವುದಾದರೆ ಅದನ್ನು ಅವನಿಂದ ಎಂದಿಗೂ ಸ್ವೀಕರಿಸಲಾಗದು. ಪರಲೋಕದಲ್ಲಿ ಅವನು ನಷ್ಟಹೊಂದಿದದವರ ಪೈಕಿ ಸೇರಿದವನಾಗುವನು.﴾** (ಕುರ್‌ಆನ್ 3:85)

ದೇವನು ಇನ್ನೊಂದು ಕಡೆ ಹೇಳಿರುವನು:

**﴿ಅವಿಶ್ವಾಸಿಗಳು ಮತ್ತು ಅವಿಶ್ವಾಸಿಯಾಗಿಯೇ ಮರಣಹೊಂದಿದವರು ಯಾರೋ ಅವರ ಪೈಕಿ ಒಬ್ಬನು ಭೂಮಿ ತುಂಬಾ ಚಿನ್ನವನ್ನು ಪ್ರಾಯಶ್ಚಿತ್ತವಾಗಿ ನೀಡಿದರೂ ಅದನ್ನು ಅವನಿಂದ ಸ್ವೀಕರಿಸಲಾಗದು. ಅವರಿಗೆ ಯಾತನಾಮಯವಾದ ಶಿಕ್ಷೆಯಿರುವುದು. ಅವರಿಗೆ ಸಹಾಯಕರಾಗಿ ಯಾರೂ ಇರಲಾರರು.﴾** (ಕುರ್‌ಆನ್ 3:91)

ಒಬ್ಬನು ಹೀಗೆ ಕೇಳುವನು: 'ಇಸ್ಲಾಮ್ ಒಂದು ಉತ್ತಮ ಧರ್ಮವಾಗಿದೆ. ಆದರೆ ನಾನು ಇಸ್ಲಾಮಿಗೆ ಮತಾಂತರಗೊಂಡರೆ ನನ್ನ ಕುಟುಂಬಿಕರು, ಗೆಳೆಯರು ಹಾಗೂ ಇತರ ಜನರು ನನಗೆ ಕಿರುಕುಳ ಕೊಡುವರು ಮತ್ತು ನನ್ನನ್ನು ಗೇಲಿ ಮಾಡುವರು. ಆದ್ದರಿಂದ ನಾನು ಇಸ್ಲಾಮಿಗೆ ಮತಾಂತರಗೊಳ್ಳದಿದ್ದರೆ ನನಗೆ ಸ್ವರ್ಗ ಪ್ರವೇಶಿಸಬಹುದೇ ಮತ್ತು ನರಕಾಗ್ನಿಯಿಂದ ಪಾರಾಗಬಹುದೇ?'

ಇದಕ್ಕಿರುವ ಉತ್ತರವನ್ನು ದೇವನು ಮೇಲಿನ ವಚನದಲ್ಲಿ ಹೇಳಿದ್ದಾನೆ: **"ಯಾರಾದರೂ ಇಸ್ಲಾಮ್‌ಗೆ ಹೊರತಾಗಿರುವುದನ್ನು ಧರ್ಮವಾಗಿ ಅರಸುವುದಾದರೆ ಅದನ್ನು ಅವನಿಂದ ಎಂದಿಗೂ ಸ್ವೀಕರಿಸಲಾಗದು. ಪರಲೋಕದಲ್ಲಿ ಅವನು ನಷ್ಟಹೊಂದಿದದವರ ಪೈಕಿ ಸೇರಿದವನಾಗುವನು."**

ಜನರನ್ನು ಇಸ್ಲಾಮಿನೆಡೆಗೆ ಕರೆಯಲು ದೇವನು ಮುಹಮ್ಮದ್(ﷺ)ರನ್ನು ಕಳುಹಿಸಿದ ಬಳಿಕ ಇಸ್ಲಾಮಿನ ಹೊರತು ಇತರ ಯಾವುದಾದರೂ ಧರ್ಮದೊಂದಿಗೆ ಗುರುತಿಸಿಕೊಳ್ಳುವುದನ್ನು ದೇವನು ಸ್ವೀಕರಿಸಲಾರನು. ದೇವನು ನಮ್ಮ ಸೃಷ್ಟಿಕರ್ತನೂ ಪರಿಪಾಲಕನೂ ಆಗಿದ್ದಾನೆ. ಈ ಭೂಮಿಯಲ್ಲಿರುವುದೆಲ್ಲವನ್ನೂ ಅವನು ನಮಗಾಗಿ ಸೃಷ್ಟಿಸಿದ್ದಾನೆ. ಆದ್ದರಿಂದ ಇದೆಲ್ಲದರ ಬಳಿಕವೂ ಯಾರಾದರೂ ಅಲ್ಲಾಹನಲ್ಲಿ, ಅವನ ಪ್ರವಾದಿಯಾದ ಮುಹಮ್ಮದ್(ﷺ)ರಲ್ಲಿ ಮತ್ತು ಅವನ ಧರ್ಮವಾದ ಇಸ್ಲಾಮಿನಲ್ಲಿ ವಿಶ್ವಾಸವಿಡಲು ನಿರಾಕರಿಸುವುದಾದರೆ ಆತ ಅಥವಾ ಆಕೆ ಪರಲೋಕದಲ್ಲಿ ಶಿಕ್ಷಿಸಲ್ಪಡುವರು ಎಂಬುದು ನ್ಯಾಯಬದ್ಧವಾಗಿದೆ. ವಾಸ್ತವಿಕವಾಗಿ ನಮ್ಮನ್ನು ಸೃಷ್ಟಿಸಿರುವುದರ ಮುಖ್ಯ ಉದ್ದೇಶವು ದೇವನನ್ನು ಮಾತ್ರ ಆರಾಧಿಸುವುದು ಮತ್ತು ಅವನ

ಆಜ್ಞಾಪಾಲನೆ ಮಾಡುವುದಾಗಿದೆ. ಇದನ್ನು ದೇವನು ಕುರ್‌ಆನಿನಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. (51:56)

ನಾವು ಜೀವಿಸುತ್ತಿರುವ ಈ ಬದುಕು ತಾತ್ಕಾಲಿಕವಾಗಿದೆ. ನಾವು ಭೂಮಿಯಲ್ಲಿ ಜೀವಿಸಿದ್ದು ಒಂದು ದಿನ ಅಥವಾ ದಿನದ ಒಂದು ಭಾಗ ಮಾತ್ರವಾಗಿತ್ತೆಂದು ಅವಿಶ್ವಾಸಿಗಳು ವಿಚಾರಣೆಯ ದಿನದಂದು ಹೇಳುವರು. ದೇವನು ಕುರ್‌ಆನಿನಲ್ಲಿ ಹೇಳಿದಂತೆ:

> ﴿**ಅಲ್ಲಾಹು ಕೇಳುವನು: 'ನೀವು ಭೂಮಿಯಲ್ಲಿ ಎಷ್ಟು ವರ್ಷಗಳ ಕಾಲ ವಾಸಿಸಿದಿರಿ?' ಅವರು ಹೇಳುವರು: 'ನಾವು ಒಂದು ದಿನ ಅಥವಾ ದಿನವೊಂದರ ಅಲ್ಪಭಾಗದಷ್ಟು ಮಾತ್ರ ವಾಸಿಸಿರುವೆವು...'**﴾ (ಕುರ್‌ಆನ್ 23:112–113)

ದೇವನು ಹೇಳುತ್ತಾನೆ:

> ﴿**ನಾವು ನಿಮ್ಮನ್ನು ಉದ್ದೇಶರಹಿತವಾಗಿ ಸೃಷ್ಟಿಸಿರುವೆವು ಮತ್ತು ನೀವು ನಮ್ಮ ಬಳಿಗೆ ಮರಳಿ ಬರಲಾರಿರಿ ಎಂದೂ ನೀವು ಭಾವಿಸಿರುವಿರಾ? ನೈಜ ಅಧಿಪತಿಯಾಗಿರುವ ಅಲ್ಲಾಹು ಅತ್ಯುನ್ನತನಾಗಿರುವನು. ಅವನ ಹೊರತು ಅನ್ಯ ಆರಾಧ್ಯರಿಲ್ಲ...**﴾ (ಕುರ್‌ಆನ್ 23:115–116)

ಪರಲೋಕ ಜೀವನವೇ ನಿಜವಾದ ಜೀವನ. ಅದು ಕೇವಲ ಆಧ್ಯಾತ್ಮಿಕ ಮಾತ್ರವಲ್ಲ, ಭೌತಿಕವೂ ಆಗಿದೆ. ನಾವು ನಮ್ಮ ಆತ್ಮ ಹಾಗೂ ದೇಹಗಳೊಂದಿಗೆ ಅಲ್ಲಿ ಬದುಕುವೆವು. ಇಹಲೋಕವನ್ನು ಪರಲೋಕದೊಂದಿಗೆ ಹೋಲಿಸುತ್ತಾ ಮುಹಮ್ಮದ್(ﷺ)ರು ಹೇಳುತ್ತಾರೆ: **{ಪರಲೋಕಕ್ಕೆ ಹೋಲಿಸಿದರೆ ಈ ಇಹಲೋಕದ ಮೌಲ್ಯವು ಒಬ್ಬ ವ್ಯಕ್ತಿ ತನ್ನ ಬೆರಳನ್ನು ಸಮುದ್ರಕ್ಕೆ ಮುಳುಗಿಸಿದರೆ ಎಷ್ಟು ನೀರು ಅವನ ಬೆರಳಲ್ಲಿ ಉಳಿಯುವುದೋ ಅಷ್ಟು ಮಾತ್ರವಾಗಿದೆ.}**[1] ಪರಲೋಕಕ್ಕೆ ಹೋಲಿಸಿದರೆ ಇಹಲೋಕದ ಮೌಲ್ಯವು ಸಮುದ್ರಕ್ಕೆ ಹೋಲಿಸಿದರೆ ಬೆರಳಲ್ಲಿರುವ ನೀರಿನ ಹನಿಗಳು ಎಷ್ಟಿರುವುದೋ ಅಷ್ಟು ಮಾತ್ರವಾಗಿದೆ.

## ಒಬ್ಬ ವ್ಯಕ್ತಿ ಮುಸ್ಲಿಮನಾಗುವುದು ಹೇಗೆ?

***"ಲಾ ಇಲಾಹ ಇಲ್ಲಲ್ಲಾಹು ಮುಹಮ್ಮದುರ್ರಸೂಲುಲ್ಲಾಹ್"*** ಎಂದು ಹೇಳುವ ಮೂಲಕ ಒಬ್ಬ ವ್ಯಕ್ತಿ ಇಸ್ಲಾಮಿಗೆ ಮತಾಂತರಗೊಳ್ಳುತ್ತಾನೆ ಮತ್ತು ಮುಸ್ಲಿಮನಾಗುತ್ತಾನೆ. ಈ ವಾಕ್ಯದ ಅರ್ಥ: **"ಅಲ್ಲಾಹನ**[2] **ಹೊರತು ಅನ್ಯ ದೇವರಿಲ್ಲ. ಮುಹಮ್ಮದ್(ﷺ)ರು ಅವನ ಸಂದೇಶವಾಹಕರಾಗಿದ್ದಾರೆ"** ಎಂದಾಗಿದೆ.

---

1. *ಸಹೀಹ್ ಮುಸ್ಲಿಮ್* #2858 ಮತ್ತು *ಮುಸ್ನದ್ ಅಹ್ಮದ್* #17560
2. ಪುಟ 47ರಲ್ಲಿ ಹೇಳಲಾದಂತೆ, *ಅಲ್ಲಾಹು* ಎಂಬ ಅರಬಿ ಪದದ ಅರ್ಥ ದೇವನು (ಅಂದರೆ ಸಮಸ್ತ ವಿಶ್ವವನ್ನು ಸೃಷ್ಟಿಸಿ ಪರಿಪಾಲಿಸುತ್ತಿರುವ ಏಕೈಕ ಸತ್ಯದೇವನು) ಎಂದಾಗಿದೆ. ಅರಬಿ ಮಾತನಾಡುವ ಮುಸ್ಲಿಮರು ಮತ್ತು ಕ್ರೈಸ್ತರು ಕೂಡ ದೇವನನ್ನು *ಅಲ್ಲಾಹು* ಎಂದು ಕರೆಯುತ್ತಾರೆ. ಈ ಹೆಸರು ಏಕೈಕ ಸತ್ಯದೇವನಿಗಿಲ್ಲದೆ ಬೇರಾರಿಗೂ ಬಳಸಲಾಗುವುದಿಲ್ಲ. ಹೆಚ್ಚಿನ ಮಾಹಿತಿಗಾಗಿ ಪುಟ 47 ನೋಡಿ.

ಇದರ ಮೊದಲ ಭಾಗವಾದ "ಅಲ್ಲಾಹನ ಹೊರತು ಅನ್ಯ ದೇವರಿಲ್ಲ" ಎಂದರೆ ಅಲ್ಲಾಹನ ಹೊರತು ಆರಾಧನೆಗೆ ಅರ್ಹರಾಗಿ ಅನ್ಯರಿಲ್ಲ, ಅವನಿಗೆ ಸಹಭಾಗಿಗಳಾಗಲಿ, ಸಂತತಿಯಾಗಲಿ ಇಲ್ಲ ಎಂದಾಗಿದೆ. ಒಬ್ಬ ವ್ಯಕ್ತಿ ಮುಸ್ಲಿಮನಾಗಬೇಕಾದರೆ:

■ ಪವಿತ್ರ ಕುರ್‌ಆನ್ ದೇವನಿಂದ ಅವತೀರ್ಣಗೊಂಡ ಅವನ ವಚನಗಳಾಗಿವೆ ಎಂದು ವಿಶ್ವಾಸವಿಡಬೇಕು.

■ ದೇವನು ಕುರ್‌ಆನಿನಲ್ಲಿ ವಾಗ್ದಾನ ಮಾಡಿರುವಂತೆ ವಿಚಾರಣೆಯ ದಿನವು (ಪುನರುತ್ಥಾನ ದಿನವು) ಸತ್ಯವಾಗಿದೆಯೆಂದು ವಿಶ್ವಾಸವಿಡಬೇಕು.

■ ಇಸ್ಲಾಮನ್ನು ತನ್ನ ಧರ್ಮವಾಗಿ ಅಂಗೀಕರಿಸಬೇಕು.

■ ಅಲ್ಲಾಹನ ಹೊರತು ಇತರ ಯಾರನ್ನೂ ಆರಾಧಿಸಬಾರದು.

ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: **{ಒಬ್ಬ ವ್ಯಕ್ತಿ ಮರುಭೂಮಿಯೊಂದರಲ್ಲಿ ಪ್ರಯಾಣದ ಮಧ್ಯೆ ಒಂದು ಮರದ ಬುಡದಲ್ಲಿ ವಿಶ್ರಾಂತಿಗಾಗಿ ಮಲಗಿದನು. ಎದ್ದಾಗ ಅವನು ತನ್ನ ಒಂಟೆಯನ್ನು ಕಾಣದಾದನು. ಅವನ ಆಹಾರ ಪಾನೀಯಗಳೆಲ್ಲವೂ ಆ ಒಂಟೆಯ ಮೇಲಿದ್ದವು. ಒಂಟೆಯನ್ನು ಹುಡುಕಿ ಹುಡುಕಿ ಅದು ಮರಳಿ ಸಿಗುವುದರ ಬಗ್ಗೆ ಹತಾಶನಾಗಿ ಆತ ಮರದ ನೆರಳಿಗೆ ಮರಳಿದಾಗ, ಅಗೋ ಆ ಒಂಟೆ ಅಲ್ಲಿದೆ! ತನ್ನ ಸಂತೋಷವನ್ನು ಅದುಮಿಡಲು ಸಾಧ್ಯವಾಗದೆ ಆತ ಜೋರಾಗಿ ಹೇಳಿದನು: "ಓ ಅಲ್ಲಾಹ್! ನೀನು ನನ್ನ ದಾಸನಾಗಿರುವೆ ಮತ್ತು ನಾನು ನಿನ್ನ ಒಡೆಯನಾಗಿರುವೆ." ಸಂತೋಷವನ್ನು ತಾಳಿಕೊಳ್ಳಲಾಗದೆ ಅವನ ಬಾಯಿತಪ್ಪಿ ಹೇಳಿದ ಮಾತುಗಳಾಗಿದ್ದವು ಇವು. ತನ್ನ ಕಡೆಗೆ ಪಶ್ಚಾತ್ತಾಪಪಟ್ಟು ಮರಳಿ ಬರುವ ಮನುಷ್ಯನ ಬಗ್ಗೆ ದೇವನು ಈ ಒಂಟೆಯ ಯಜಮಾನನಿಗಿಂತಲೂ ಹೆಚ್ಚು ಸಂತೋಷಪಡುತ್ತಾನೆ.}**[1]



"ಅಲ್ಲಾಹನ ಹೊರತು ಆರಾಧನೆಗೆ ಅರ್ಹರಾಗಿ ಅನ್ಯರಿಲ್ಲ, ಮುಹಮ್ಮದ್(ﷺ)ರು ಅಲ್ಲಾಹನ ಸಂದೇಶವಾಹಕರಾಗಿದ್ದಾರೆ" ಎಂಬ ವಾಕ್ಯವನ್ನು ದ್ವಾರವೊಂದರಲ್ಲಿ ಬರೆಯಲಾಗಿರುವುದು.

1. *ಸಹೀಹ್ ಮುಸ್ಲಿಮ್* #2747 ಮತ್ತು *ಸಹೀಹುಲ್ ಬುಖಾರಿ* #6309

# ಕುರ್‌ಆನ್ ಎಂದರೇನು?

ದೇವನಿಂದ ಕೊನೆಯದಾಗಿ ಅವತೀರ್ಣಗೊಂಡ ಅವನ ವಚನಗಳಾದ ಕುರ್‌ಆನ್ ಮುಸ್ಲಿಮನೊಬ್ಬನ ವಿಶ್ವಾಸ ಹಾಗೂ ಕರ್ಮದ ಮೂಲ ಆಧಾರಪ್ರಮಾಣವಾಗಿದೆ. ಯುಕ್ತಿ, ಬೋಧನೆ, ಆರಾಧನೆ, ವ್ಯವಹಾರ, ಕಾನೂನು ಇತ್ಯಾದಿ ಎಲ್ಲ ವಿಷಯಗಳನ್ನೂ ಅದು ಪ್ರತಿಪಾದಿಸುತ್ತದೆ. ಆದರೂ ಅದರ ಮೂಲ ವಿಷಯವು ದೇವನ ಹಾಗೂ ಅವನ ಸೃಷ್ಟಿಗಳ ಮಧ್ಯೆಯಿರುವ ಸಂಬಂಧವಾಗಿದೆ. ಅದೇ ಸಮಯ ಅದು ನ್ಯಾಯಬದ್ಧ ಸಮಾಜ, ಸರಿಯಾದ ಸ್ವಭಾವ, ನ್ಯಾಯಬದ್ಧವಾದ ಆರ್ಥಿಕ ವ್ಯವಸ್ಥೆಗೆ ಬೇಕಾದ ಮಾರ್ಗದರ್ಶನ ಹಾಗೂ ವಿಶದ ಬೋಧನೆಗಳನ್ನು ಒದಗಿಸುತ್ತದೆ.



ಕುರ್‌ಆನ್ ಎಂಬುದು ಮುಹಮ್ಮದ್(ﷺ)ರಿಗೆ ಅರಬಿ ಭಾಷೆಯಲ್ಲಿ ಅವತೀರ್ಣಗೊಂಡ ದೇವನ ವಚನಗಳಾಗಿವೆ. ಆದ್ದರಿಂದ ಕನ್ನಡ ಅಥವಾ ಇತರ ಯಾವುದಾದರೂ ಭಾಷೆಗಳಲ್ಲಿರುವ ಕುರ್‌ಆನಿನ ಅನುವಾದವು ಕುರ್‌ಆನ್ ಆಗಲಿ, ಅದರ ಆವೃತ್ತಿಯಾಗಲಿ ಅಲ್ಲ. ಅದು ಕೇವಲ ಕುರ್‌ಆನಿನ ಅರ್ಥಾನುವಾದ ಮಾತ್ರವಾಗಿದೆ. ಕುರ್‌ಆನ್ ಎಂಬುದು ಅದು ಅವತೀರ್ಣಗೊಂಡ ಅರಬಿ ಭಾಷೆಯಲ್ಲಿ ಮಾತ್ರ ಅಸ್ತಿತ್ವದಲ್ಲಿದೆ.

# ಪ್ರವಾದಿ ಮುಹಮ್ಮದ್(ﷺ) ಯಾರು?

ಮುಹಮ್ಮದ್(ﷺ)ರು 570ನೇ ಇಸವಿಯಲ್ಲಿ ಮಕ್ಕಾದಲ್ಲಿ ಜನ್ಮ ತಾಳಿದರು. ಅವರ ಜನನಕ್ಕೆ ಮೊದಲೇ ಅವರ ತಂದೆ ತೀರಿಹೋದರು ಮತ್ತು ಅವರ ಜನನ ಕೆಲವೇ ವರ್ಷಗಳಲ್ಲಿ ಅವರ ತಾಯಿಯೂ ತೀರಿಹೋದರು. ಪ್ರತಿಷ್ಠಿತ ಕುರೈಶ್ ಮನೆತನಕ್ಕೆ ಸೇರಿದ ಅವರನ್ನು ಅವರ ಚಿಕ್ಕಪ್ಪ ಪಾಲನೆ ಪೋಷಣೆ ಮಾಡಿದರು. ಓದಲು ಅಥವಾ ಬರೆಯಲು ಗೊತ್ತಿಲ್ಲದ ಅನಕ್ಷರಸ್ಥರಾಗಿಯೇ ಅವರು ಬೆಳೆದರು ಮತ್ತು ಅನಕ್ಷರಸ್ಥರಾಗಿಯೇ ಮರಣಹೊಂದಿದರು. ಅವರು ಪ್ರವಾದಿಯಾಗುವ ಮೊದಲೇ ಅವರ ಜನತೆಯು ವಿದ್ಯೆಯ ಬಗ್ಗೆ ಅಜ್ಞಾನಿಗಳಾಗಿದ್ದರು. ಆದ್ದರಿಂದ ಅವರಲ್ಲಿ ಹೆಚ್ಚಿನವರೂ ಅನಕ್ಷರಸ್ಥರಾಗಿದ್ದರು. ಮುಹಮ್ಮದ್(ﷺ)ರು ಸತ್ಯಸಂಧರೂ, ನಿಷ್ಕಳಂಕರೂ, ವಿಶ್ವಾಸಯೋಗ್ಯರೂ, ದಯಾಳುವೂ, ಪ್ರಾಮಾಣಿಕರೂ ಆಗಿ ಬೆಳೆದರು.(1) ಅವರು ತುಂಬಾ ಧಾರ್ಮಿಕರಾಗಿದ್ದರು. ತಮ್ಮ ಸಮಾಜದ ಅಧಃಪತನವನ್ನು ಹಾಗೂ ವಿಗ್ರಹಾರಾಧನೆಯನ್ನು ಅವರು ಹಿಂದಿನಿಂದಲೇ ಅಸಹ್ಯಪಡುತ್ತಿದ್ದರು.

40ನೇ ವಯಸ್ಸಿನಲ್ಲಿ ಮುಹಮ್ಮದ್(ﷺ)ರು ಗೇಬ್ರಿಯಲ್ ಎಂಬ ದೇವದೂತರ ಮೂಲಕ ದೇವನಿಂದ ಮೊಟ್ಟಮೊದಲ ಸಂದೇಶವನ್ನು ಪಡೆದರು. ನಂತರ 23 ವರ್ಷಗಳ ಕಾಲ ಅವರಿಗೆ ಸಂದೇಶಗಳು ಅವತೀರ್ಣಗೊಳ್ಳುತ್ತಲೇ ಇದ್ದವು. ಈ ಸಂದೇಶಗಳ ಸಂಪೂರ್ಣ ಕ್ರೋಢೀಕರಣವೇ ಕುರ್‌ಆನ್.

1. *ಮುಸ್ನದ್ ಅಹ್ಮದ್* #15078



ಮದೀನಾದಲ್ಲಿರುವ ಪ್ರವಾದಿ ಮುಹಮ್ಮದ್(ﷺ)ರ ಮಸೀದಿ

ದೇವನು ತಮಗೆ ಅವತೀರ್ಣಗೊಳಿಸಿದ ಕುರ್‌ಆನನ್ನು ಜನರಿಗೆ ಓದಿಕೊಡಲು ಮತ್ತು ಸತ್ಯವನ್ನು ಬೋಧಿಸಲು ಮುಹಮ್ಮದ್(ﷺ)ರು ಆರಂಭಿಸಿದಾಗ, ಅವರಿಗೆ ಮತ್ತು ಚಿಕ್ಕ ಸಂಖ್ಯೆಯಲ್ಲಿದ್ದ ಅವರ ಅನುಯಾಯಿಗಳಿಗೆ ಅವಿಶ್ವಾಸಿಗಳು ಕಿರುಕುಳ ಕೊಡತೊಡಗಿದರು. ಈ ಕಿರುಕುಳವು ಉಗ್ರರೂಪವನ್ನು ತಾಳಿದಾಗ 622ನೇ ಇಸವಿಯಲ್ಲಿ ದೇವನು ಅವರಿಗೆ ವಲಸೆ ಹೋಗುವಂತೆ ಅಪ್ಪಣೆಕೊಟ್ಟನು. ಮಕ್ಕಾದ ಉತ್ತರ ದಿಕ್ಕಿಗೆ ಸುಮಾರು 260 ಮೈಲಿ ದೂರವಿರುವ ಮದೀನಾ ಪಟ್ಟಣಕ್ಕಿರುವ ಈ ವಲಸೆಯು ಇಸ್ಲಾಮೀ ಕ್ಯಾಲೆಂಡರ್‌ನ ಆರಂಭವಾಗಿದೆ.

ಹಲವು ವರ್ಷಗಳ ಬಳಿಕ ಮುಹಮ್ಮದ್(ﷺ)ರು ಮತ್ತು ಅವರ ಅನುಯಾಯಿಗಳು ಮಕ್ಕಾವನ್ನು ಜಯಿಸಿದರು ಮತ್ತು ಅಲ್ಲಿ ಅವರು ತಮ್ಮ ಶತ್ರುಗಳಿಗೆ ಸಾರ್ವತ್ರಿಕ ಕ್ಷಮಾಪಣೆ ನೀಡಿದರು. ತಮ್ಮ 63ನೇ ವಯಸ್ಸಿನಲ್ಲಿ ಮುಹಮ್ಮದ್(ﷺ)ರು ಮರಣಹೊಂದುವ ಮೊದಲೇ ಅರೇಬಿಯನ್ ಉಪದ್ವೀಪದ ಬಹುಭಾಗವು ಇಸ್ಲಾಮಿಗೆ ಶರಣಾಗಿತ್ತು. ಅವರ ಮರಣದ ಬಳಿಕ ಒಂದು ಶತಮಾನದೊಳಗೆ ಇಸ್ಲಾಮ್ ಪಶ್ಚಿಮದಲ್ಲಿ ಸ್ಪೈನ್‌ನ ತನಕ ಮತ್ತು ಪೂರ್ವದಲ್ಲಿ ಚೀನಾದ ತನಕ ಹಬ್ಬಿತು. ಇಸ್ಲಾಮೀ ಬೋಧನೆಯಲ್ಲಿರುವ ಸತ್ಯ ಮತ್ತು ಸ್ಪಷ್ಟತೆಯೇ ಅದರ ಕ್ಷಿಪ್ರ ಹಾಗೂ ಶಾಂತಿಯುತ ಹಬ್ಬುವಿಕೆಗೆ ಪ್ರಮುಖ ಕಾರಣವಾಗಿತ್ತು. ಆರಾಧನೆಗೆ ಅರ್ಹನಾಗಿರುವ ಏಕೈಕ ದೇವನಲ್ಲಿ ಮಾತ್ರ ವಿಶ್ವಾಸವಿಡಲು ಇಸ್ಲಾಮ್ ಕರೆ ನೀಡುತ್ತದೆ.

ಪ್ರವಾದಿ ಮುಹಮ್ಮದ್(ﷺ)ರು ವಿಶ್ವಾಸಾರ್ಹತೆ, ನ್ಯಾಯ, ಕರುಣೆ, ಸಹಾನುಭೂತಿ, ಸತ್ಯಸಂಧತೆ, ಧೈರ್ಯ ಇತ್ಯಾದಿಗಳ ಪರಿಪೂರ್ಣ ಉದಾಹರಣೆಯಾಗಿದ್ದರು. ಅವರೊಬ್ಬ ಮನುಷ್ಯರಾಗಿದ್ದರೂ ಸಹ, ಸರ್ವ ರೀತಿಯ ಕೆಟ್ಟ ಸ್ವಭಾವಗಳಿಂದಲೂ ಅವರು ಮುಕ್ತರಾಗಿದ್ದರು. ಅವರು ಕೇವಲ ದೇವನಿಗಾಗಿ ಮತ್ತು ಪರಲೋಕದಲ್ಲಿ ಸಿಗುವ ಪುಣ್ಯಕ್ಕಾಗಿ ಮಾತ್ರ ಶ್ರಮಿಸಿದರು. ಅವರು ತಮ್ಮೆಲ್ಲ ಕೆಲಸ ಕಾರ್ಯಗಳಲ್ಲೂ ಜಾಗರೂಕರೂ, ದೇವನನ್ನು ಅತ್ಯಧಿಕ ಭಯಪಡುವವರೂ ಆಗಿದ್ದರು.

(ಮುಹಮ್ಮದ್(ﷺ)ರ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಸಂದರ್ಶಿಸಿರಿ: http://www.islam-guide.com/more/#Muhammad)

1. *ಸಹೀಹ್ ಮುಸ್ಲಿಮ್* #2747 ಮತ್ತು *ಸಹೀಹುಲ್ ಬುಖಾರಿ* #6309

# ಇಸ್ಲಾಮಿನ ಪ್ರಚಾರವು ವಿಜ್ಞಾನದ ಪ್ರಗತಿಯ ಮೇಲೆ ಹೇಗೆ ಪರಿಣಾಮ ಬೀರಿತು?



ಮನುಷ್ಯನು ತನ್ನ ಬುದ್ಧಿಶಕ್ತಿ ಹಾಗೂ ವೀಕ್ಷಣೆಯನ್ನು ಬಳಸಬೇಕೆಂದು ಇಸ್ಲಾಮ್ ಕರೆ ನೀಡುತ್ತದೆ. ಇಸ್ಲಾಮ್ ಹರಡತೊಡಗಿದ ಕೆಲವೇ ವರ್ಷಗಳಲ್ಲಿ ಮಹಾ ನಾಗರಿಕತೆಗಳು ಹಾಗೂ ವಿಶ್ವವಿದ್ಯಾಲಯಗಳು ತಲೆಯೆತ್ತಿದವು. ಪೌರಸ್ತ್ಯ ಹಾಗೂ ಪಾಶ್ಚಾತ್ಯ ಕಲ್ಪನೆಗಳ ಸಂಯೋಜನೆ ಮತ್ತು ಹೊಸ ಹಾಗೂ ಹಳೆಯ ವಿಚಾರಗಳ ಕೂಡುವಿಕೆಯು ವೈದ್ಯಕೀಯಶಾಸ್ತ್ರ, ಗಣಿತಶಾಸ್ತ್ರ, ಭೌತಶಾಸ್ತ್ರ, ಖಗೋಳ ಶಾಸ್ತ್ರ, ಭೂಗೋಳಶಾಸ್ತ್ರ, ವಾಸ್ತುಶಿಲ್ಪ, ಕಲೆ, ಸಾಹಿತ್ಯ ಮತ್ತು ಇತಿಹಾಸದಲ್ಲಿ ಪ್ರಗತಿಯನ್ನು ತಂದವು. ಬೀಜಗಣಿತ, ಅರಬಿ ಸಂಖ್ಯೆ, ಸೊನ್ನೆ ಎಂಬ ಪರಿಕಲ್ಪನೆ (ಇದು ಗಣಿತಶಾಸ್ತ್ರದ ಪ್ರಗತಿಯಲ್ಲಿ ಪ್ರಮುಖ ಪಾತ್ರ ವಹಿಸಿದೆ) ಮೊದಲಾದ ಅನೇಕ ನಿರ್ಣಾಯಕ ವ್ಯವಸ್ಥೆಗಳು ಮಧ್ಯಯುಗೀನ ಯೂರೋಪಿಗೆ



**ಖಮಾಪಕ:** ತೀರಾ ಇತ್ತೀಚಿನ ತನಕ ಪಾಶ್ಚಾತ್ಯರಲ್ಲಿ ಅತಿಹೆಚ್ಚು ಬಳಕೆಯಲ್ಲಿದ್ದ, ಮುಸ್ಲಿಮರು ಅಭಿವೃದ್ಧಿಪಡಿಸಿದ ಪ್ರಮುಖ ವೈಜ್ಞಾನಿಕ ಉಪಕರಣಗಳಲ್ಲಿ ಒಂದು.



ಮುಸ್ಲಿಮ್ ವೈದ್ಯರು ಶಸ್ತ್ರಕ್ರಿಯೆಗೆ ಹೆಚ್ಚಿನ ಗಮನ ನೀಡಿದರು ಮತ್ತು ಈ ಹಸ್ತಪ್ರತಿಯಲ್ಲಿ ಕಾಣುವಂತೆ ಶಸ್ತ್ರಕ್ರಿಯೆಗೆ ಸಂಬಂಧಿಸಿದ ಅನೇಕ ಉಪಕರಣಗಳನ್ನು ಅಭಿವೃದ್ಧಿಪಡಿಸಿದರು.

ವರ್ಗಾವಣೆಯಾಗಿದ್ದು ಮುಸ್ಲಿಮ್ ಜಗತ್ತಿನಿಂದಾಗಿತ್ತು. ಐರೋಪ್ಯ ಸಂಶೋಧನೆಗಳನ್ನು ಸಾಧ್ಯವಾಗಿಸಿದ ಖಮಾಪಕ, ಕಾಲು ವರ್ತುಲಾಕೃತಿಯ ಉಪಕರಣ, ಉತ್ತಮ ನಾವಿಕ ನಕ್ಷೆಗಳು ಮೊದಲಾದ ಸಂಕೀರ್ಣ ಉಪಕರಣಗಳನ್ನು ಅಭಿವೃದ್ಧಿಪಡಿಸಿದವರು ಮುಸ್ಲಿಮರಾಗಿದ್ದರು.

## ಯೇಸುಕ್ರಿಸ್ತರ ಬಗ್ಗೆ ಮುಸ್ಲಿಮರ ನಂಬಿಕೆಯೇನು?

ಯೇಸುಕ್ರಿಸ್ತರನ್ನು (ಅವರ ಮೇಲೆ ಶಾಂತಿಯಿರಲಿ) ಮುಸ್ಲಿಮರು ಗೌರವಿಸುತ್ತಾರೆ ಮತ್ತು ಆದರಿಸುತ್ತಾರೆ. ಅವರು ಮನುಕುಲಕ್ಕೆ ಬಂದ ದೇವನ ಮಹಾನ್ ಸಂದೇಶವಾಹಕರ ಪೈಕಿ ಒಬ್ಬರಾಗಿದ್ದಾರೆಂದು ಪರಿಗಣಿಸುತ್ತಾರೆ. ಅವರ ಕನ್ಯಾ ಜನನವನ್ನು ಕುರ್‌ಆನ್ ದೃಢೀಕರಿಸುತ್ತದೆ. 'ಮರ್ಯಮ್' (ಮೇರಿ) ಎಂಬ ಹೆಸರಲ್ಲಿ ಕುರ್‌ಆನ್‌ನಲ್ಲಿ ಒಂದು ಅಧ್ಯಾಯವೇ ಇದೆ. ಯೇಸುಕ್ರಿಸ್ತರ ಜನನವನ್ನು ಕುರ್‌ಆನ್ ಹೀಗೆ ವಿವರಿಸುತ್ತದೆ:

> **﴾'ಓ ಮರ್ಯಮ್! ಖಂಡಿತವಾಗಿಯೂ ಅಲ್ಲಾಹು ತನ್ನ ವತಿಯ ಒಂದು 'ವಚನ'ದ ಬಗ್ಗೆ ತಮಗೆ ಶುಭವಾರ್ತೆಯನ್ನು ತಿಳಿಸುತ್ತಿರುವನು. ಅವರ ಹೆಸರು ಮರ್ಯಮ್‌ರ ಪುತ್ರ ಈಸಾ ಮಸೀಹ್ ಎಂದಾಗಿರುವುದು. ಅವರು ಇಹಲೋಕದಲ್ಲೂ ಪರಲೋಕದಲ್ಲೂ ಮಹತ್ವವುಳ್ಳವರೂ, ಸಾಮೀಪ್ಯವನ್ನು ಗಳಿಸಿದವರಲ್ಲಿ ಸೇರಿದವರೂ ಆಗಿರುವರು' ಎಂದು ಮಲಕ್‌ಗಳು ಹೇಳಿದ ಸಂದರ್ಭ**(ವನ್ನು ಸ್ಮರಿಸಿರಿ). **'ಅವರು ತೊಟ್ಟಿಲಲ್ಲಿರುವಾಗಲೂ, ಮಧ್ಯವಯಸ್ಕರಾಗಿರುವಾಗಲೂ ಜನರೊಂದಿಗೆ ಮಾತನಾಡುವರು ಮತ್ತು ಅವರು ಸಜ್ಜನರಲ್ಲಿ ಸೇರಿದವರಾಗಿರುವರು'. ಆಕೆ** (ಮರ್ಯಮ್) **ಹೇಳಿದರು: 'ನನ್ನ ಪ್ರಭೂ! ನನ್ನನ್ನು ಯಾವೊಬ್ಬ ಮನುಷ್ಯನೂ ಸ್ಪರ್ಶಿಸದಿರುವಾಗ ನನಗೆ ಮಗುವಾಗುವುದಾದರೂ ಹೇಗೆ!?' ಅಲ್ಲಾಹು ಹೇಳಿದನು: 'ಹಾಗೆಯೇ ಆಗುವುದು. ಅಲ್ಲಾಹು ತಾನಿಚ್ಛಿಸುವುದನ್ನು ಸೃಷ್ಟಿಸುವನು. ಅವನೊಂದು ವಿಷಯವನ್ನು ತೀರ್ಮಾನಿಸಿದರೆ ಅದರೊಂದಿಗೆ 'ಉಂಟಾಗು' ಎಂದಷ್ಟೇ ಹೇಳುವನು. ತಕ್ಷಣ ಅದುಂಟಾಗುವುದು!'﴿** (ಕುರ್‌ಆನ್ 3:45–47)

ಆದಮರನ್ನು ತಂದೆಯಿಲ್ಲದೆ ಅಸ್ತಿತ್ವಕ್ಕೆ ತಂದ ದೇವನ ಆಜ್ಞೆಯಿಂದಲೇ ಯೇಸುಕ್ರಿಸ್ತರು ಕೂಡಾ ಪವಾಡಸದೃಶವಾಗಿ ಜನ್ಮತಾಳಿದರು. ದೇವನು ಹೇಳುತ್ತಾನೆ:

> **﴾ಅಲ್ಲಾಹುವಿನ ಮಟ್ಟಿಗೆ ಈಸಾರವರ ಉಪಮೆಯು ಆದಮ್‌ರ ಉಪಮೆಯಂತಿದೆ. ಅವರನ್ನು** (ಆದಮ್‌ರನ್ನು) **ಅವನು ಮಣ್ಣಿನಿಂದ ಸೃಷ್ಟಿಸಿದನು. ತರುವಾಯ ಅವರೊಂದಿಗೆ ಉಂಟಾಗು ಎಂದನು. ತಕ್ಷಣ ಅವರು** (ಆದಮ್) **ಉಂಟಾದರು.﴿** (ಕುರ್‌ಆನ್ 3:59)

ತಮ್ಮ ಪ್ರವಾದಿತ್ವದ ಸಂದರ್ಭದಲ್ಲಿ ಯೇಸುಕ್ರಿಸ್ತರು ಅನೇಕ ಪವಾಡಗಳನ್ನು ತೋರಿಸಿದ್ದರು. ಯೇಸುಕ್ರಿಸ್ತರು ಹೇಳಿದ್ದಾಗಿ ದೇವನು ಹೇಳುತ್ತಾನೆ:

**﴾'ನಾನು ನಿಮ್ಮ ಪ್ರಭುವಿನ ವತಿಯ ದೃಷ್ಟಾಂತದೊಂದಿಗೆ ನಿಮ್ಮ ಬಳಿಗೆ ಬಂದಿರುವೆನು. ನಾನು ಜೇಡಿ ಮಣ್ಣಿನಿಂದ ಹಕ್ಕಿಯ ಆಕೃತಿಯೊಂದನ್ನು ನಿಮಗಾಗಿ ವಿನ್ಯಾಸಗೊಳಿಸುವೆನು. ತರುವಾಯ ನಾನದರಲ್ಲಿ ಊದುವಾಗ ಅಲ್ಲಾಹುವಿನ ಅನುಮತಿಯೊಂದಿಗೆ ಅದೊಂದು ಹಕ್ಕಿಯಾಗಿ ಮಾರ್ಪಡುವುದು. ನಾನು ಅಲ್ಲಾಹುವಿನ ಅನುಮತಿಯೊಂದಿಗೆ ಹುಟ್ಟು ಕುರುಡನನ್ನೂ, ಕುಷ್ಠರೋಗಿಯನ್ನೂ ಗುಣಪಡಿಸುವೆನು ಮತ್ತು ಸತ್ತವರನ್ನು ಬದುಕಿಸುವೆನು. ನೀವು ತಿನ್ನುತ್ತಿರುವುದರ ಬಗ್ಗೆ ಮತ್ತು ನೀವು ನಿಮ್ಮ ಮನೆಗಳಲ್ಲಿ ಸಂಗ್ರಹಿಸಿಡುತ್ತಿರುವುದರ ಬಗ್ಗೆ ನಾನು ನಿಮಗೆ ತಿಳಿಸಿಕೊಡುವೆನು....﴿** (ಕುರ್‌ಆನ್ 3:49)

ಯೇಸುಕ್ರಿಸ್ತರನ್ನು ಶಿಲುಗೆಬೆಗೇರಿಸಲಾಗಿದೆ ಎಂದು ಮುಸ್ಲಿಮರು ನಂಬುವುದಿಲ್ಲ. ಯೇಸುಕ್ರಿಸ್ತರ ಶತ್ರುಗಳು ಅವರನ್ನು ಶಿಲುಬೆಗೇರಿಸಲು ಉಪಾಯ ಹೂಡಿದ್ದರು. ಆದರೆ ದೇವನು ಅವರನ್ನು ರಕ್ಷಿಸಿ, ಅವರನ್ನು ತನ್ನ ಬಳಿಗೆ ಎತ್ತಿಕೊಂಡನು. ಯೇಸುಕ್ರಿಸ್ತರ ಪ್ರತಿರೂಪವನ್ನು ಬೇರೊಬ್ಬ ವ್ಯಕ್ತಿಗೆ ನೀಡಲಾಯಿತು. ಶತ್ರುಗಳು ಆ ವ್ಯಕ್ತಿಯನ್ನೇ ಯೇಸುಕ್ರಿಸ್ತರೆಂದು ಭಾವಿಸಿ ಶಿಲುಬೆಗೇರಿಸಿದರು. ದೇವನು ಹೇಳುತ್ತಾನೆ:

**﴾ಅಲ್ಲಾಹುವಿನ ಸಂದೇಶವಾಹಕರಾದ ಮರ್ಯಮ್‌ರ ಪುತ್ರ ಮಸೀಹ ಈಸಾರನ್ನು ನಾವು ಕೊಂದಿರುವೆವು ಎಂದು ಅವರು** (ಯಹೂದರು) **ಹೇಳಿದ ನಿಮಿತ್ತವೂ** (ಅವರು ಶಪಿಸಲ್ಪಟ್ಟಿರುವರು). **ವಾಸ್ತವಿಕವಾಗಿ ಅವರು ಅವರನ್ನು ಕೊಂದಿಲ್ಲ ಮತ್ತು ಶಿಲುಬೆಗೇರಿಸಿಯೂ ಇಲ್ಲ. ಆದರೆ ಅವರು** (ವಾಸ್ತವಿಕತೆಯನ್ನು) **ಗುರುತಿಸಲಾಗದೆ ಹೋದರು.﴿** (ಕುರ್‌ಆನ್ 4:157)

ಪೂರ್ವ ಪ್ರವಾದಿಗಳು ತಂದ ಮೂಲ ಸಿದ್ಧಾಂತವಾದ ಏಕದೇವವಿಶ್ವಾಸವನ್ನು ಬದಲಾಯಿಸಲು ಮುಹಮ್ಮದ್(ﷺ)ರಾಗಲಿ ಯೇಸುಕ್ರಿಸ್ತರಾಗಲಿ ಬಂದಿರಲಿಲ್ಲ. ಬದಲಾಗಿ ಅದನ್ನು ದೃಢೀಕರಿಸಲು



ಜೆರೂಸಲೇಮ್ ನಲ್ಲಿರುವ ಅಕ್ಸಾ ಮಸೀದಿ

ಮತ್ತು ನವೀಕರಿಸಲು ಅವರು ಬಂದಿದ್ದರು.[1]

ಯೇಸುಕ್ರಿಸ್ತರ ಬಗ್ಗೆ ಹೆಚ್ಚಿನ ಮಾಹಿತಿಗಳಿಗಾಗಿ ಸಂದರ್ಶಿಸಿರಿ:

http://www.islam-guide.com/more/#Jesus

## ಭಯೋತ್ಪಾದನೆಯ ಬಗ್ಗೆ ಇಸ್ಲಾಮ್ ಏನೆನ್ನುತ್ತದೆ?

ಕರುಣೆಯ ಧರ್ಮವಾಗಿರುವ ಇಸ್ಲಾಮ್ ಭಯೋತ್ಪಾದನೆಯನ್ನು ಅನುಮತಿಸುವುದಿಲ್ಲ. ದೇವನು ಕುರ್‌ಆನ್‌ನಲ್ಲಿ ಹೇಳುತ್ತಾನೆ:

> ﴿**ಧರ್ಮದ ವಿಷಯದಲ್ಲಿ ನಿಮ್ಮೊಂದಿಗೆ ಯುದ್ಧ ಮಾಡದವರು ಮತ್ತು ನಿಮ್ಮ ಮನೆಗಳಿಂದ ನಿಮ್ಮನ್ನು ಹೊರಗಟ್ಟದವರು ಯಾರೋ ಅವರಿಗೆ ನೀವು ಒಳಿತು ಮಾಡುವುದನ್ನು ಮತ್ತು ಅವರೊಂದಿಗೆ ನ್ಯಾಯಪಾಲಿಸುವುದನ್ನು ಅಲ್ಲಾಹು ನಿಮಗೆ ವಿರೋಧಿಸಲಾರನು. ಖಂಡಿತವಾಗಿಯೂ ಅಲ್ಲಾಹು ನ್ಯಾಯ ಪಾಲಿಸುವವರನ್ನು ಇಷ್ಟಪಡುವನು.**﴾ (ಕುರ್‌ಆನ್ 60:8)

ಯುದ್ಧದಲ್ಲಿ ಮಹಿಳೆಯರನ್ನು ಮತ್ತು ಮಕ್ಕಳನ್ನು ಕೊಲ್ಲುವುದನ್ನು ಪ್ರವಾದಿ ಮುಹಮ್ಮದ್ (ﷺ)ರು ವಿರೋಧಿಸಿದರು.[2] ಅವರು ಸೈನಿಕರಿಗೆ ಉಪದೇಶ ನೀಡುತ್ತಾ ಹೇಳಿದರು: {**...ನೀವು ದ್ರೋಹವೆಸಗಬಾರದು, ಹದ್ದುಮೀರಬಾರದು, ನವಜಾತ ಶಿಶುವನ್ನು ಹತ್ಯೆ ಮಾಡಬಾರದು.**}[3]

---

1. ದೇವನು ಯೇಸುಕ್ರಿಸ್ತರಿಗೆ *ಇಂಜೀಲ್* ಎಂಬ ಹೆಸರಿನ ಒಂದು ಗ್ರಂಥವನ್ನು ಅವತೀರ್ಣಗೊಳಿಸಿರುವನು ಎಂದು ಮುಸ್ಲಿಮರು ವಿಶ್ವಾಸವಿಡುತ್ತಾರೆ. ದೇವನು ಯೇಸುಕ್ರಿಸ್ತರಿಗೆ ಬೋಧಿಸಿದ ಅದರ ಕೆಲವು ಭಾಗಗಳನ್ನು ಈಗಲೂ ಹೊಸ ಒಡಂಬಡಿಕೆಯಲ್ಲಿ ಕಾಣಬಹುದಾಗಿದೆ. ಆದರೆ ಇದರರ್ಥ ಮುಸ್ಲಿಮರು ಇಂದು ಅಸ್ತಿತ್ವದಲ್ಲಿರುವ ಬೈಬಲ್‌ನಲ್ಲಿ ವಿಶ್ವಾಸವಿಡುತ್ತಾರೆ ಎಂದಲ್ಲ. ಯಾಕೆಂದರೆ ಅದು ದೇವನು ಅವತೀರ್ಣಗೊಳಿಸಿದ ಮೂಲ ರೂಪದಲ್ಲಿಲ್ಲ. ಅದು ಅನೇಕ ಬದಲಾವಣೆಗೆಳಿಗೆ, ಸೇರ್ಪಡೆಗಳಿಗೆ ಮತ್ತು ಅಳಿಸುವಿಕೆಗಳಿಗೆ ವಿಧೇಯವಾಗಿದೆ. *The Holy Bible (Revised Standard Version)* ಅನ್ನು ಪರಿಷ್ಕೃತಗೊಳಿಸಲು ನೇಮಿಸಲಾದ ಸಮಿತಿ ಕೂಡ ಹೀಗೆಯೇ ಹೇಳಿದೆ. ಈ ಸಮಿತಿಯು 32 ವಿದ್ವಾಂಸರನ್ನು ಒಳಗೊಂಡಿದೆ. ಅವರು ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸುತ್ತಿದ್ದಾರೆ. *The Holy Bible (Revised Standard Version)* ನ ಮುನ್ನುಡಿಯಲ್ಲಿ ಸಮಿತಿಯು ಹೇಳುತ್ತದೆ: "ನಕಲು ಮಾಡುವಾಗ ಬೈಬಲ್ ಪಠ್ಯವು ಅನೇಕ ಬದಲಾವಣೆಗಳಿಗೆ ಒಳಗಾಗಿದೆಯೆಂದು ಕೆಲವೊಮ್ಮೆ ಸ್ಪಷ್ಟವಾಗುತ್ತದೆ. ಆದರೆ ಯಾವುದೇ ಆವೃತ್ತಿಯೂ ತೃಪ್ತಿಕರವಾದ ಪರಿಷ್ಕರಣವನ್ನು ಒದಗಿಸುವುದಿಲ್ಲ. ಆದ್ದರಿಂದ ಸಮರ್ಥ ವಿದ್ವಾಂಸರ ಅತ್ಯುತ್ತಮ ತೀರ್ಮಾನವನ್ನು ಅನುಸರಿಸಿ ಮೂಲ ಪಠ್ಯವನ್ನು ಸಾಧ್ಯವಾಗುವಷ್ಟರ ಮಟ್ಟಿಗೆ ಪುನರ್ ನಿರ್ಮಿಸಲು ಮಾತ್ರ ನಮಗೆ ಸಾಧ್ಯ." (ಪುಟ iv) ಮುನ್ನುಡಿಯಲ್ಲಿ ಇನ್ನೊಂದು ಕಡೆ ಸಮಿತಿಯು ಹೇಳುತ್ತದೆ: "ಪ್ರಾಚೀನ ಗ್ರಂಥದ (ಮತ್ತಾಯ 9:34, ಮಾರ್ಕ 3:16, 7:4, ಲೂಕ 24:32, 51 ಇತ್ಯಾದಿ) ಗಮನಾರ್ಹವಾದ ಬದಲಾವಣೆ, ಸೇರ್ಪಡೆ ಮತ್ತು ಅಳಿಸುವಿಕೆಯನ್ನು ಸೂಚಿಸಲು ಟಿಪ್ಪಣಿಗಳನ್ನು ಸೇರಿಸಲಾಗಿದೆ." (ಪುಟ vii) ಈ ವಿಷಯದ ಬಗ್ಗೆ ಹೆಚ್ಚಿನ ಮಾಹಿತಿಗಳಿಗಾಗಿ ಸಂದರ್ಶಿಸಿರಿ: http://www.islam-guide.com/cgi-bin/goto.cgi?http://www3.sympatico.ca/shabir.ally/new_page_19.htm
2. *ಸಹೀಹ್ ಮುಸ್ಲಿಮ್* #1744 ಮತ್ತು *ಸಹೀಹುಲ್ ಬುಖಾರಿ* #3015
3. *ಸಹೀಹ್ ಮುಸ್ಲಿಮ್* #1731 ಮತ್ತು *ತಿರ್ಮಿದಿ* #1408

ಅವರು ಹೇಳಿದರು: {**ಮುಸ್ಲಿಮರೊಂದಿಗೆ ಕರಾರಿನಲ್ಲಿರುವ ಯಾರಾದರೊಬ್ಬ ವ್ಯಕ್ತಿಯನ್ನು ಯಾರಾದರೂ ಕೊಂದರೆ ಅವನು ಸ್ವರ್ಗದ ಸುವಾಸನೆಯನ್ನು ಕೂಡ ಪಡೆಯಲಾರನು. ಸ್ವರ್ಗದ ಸುವಾಸನೆಯು 40 ವರ್ಷಗಳ ಪ್ರಯಾಣದಷ್ಟು ದೂರಕ್ಕೆ ಬೀಸುತ್ತಿರುತ್ತದೆ.**}(1)

ಬೆಂಕಿ ಹಚ್ಚಿ ಶಿಕ್ಷಿಸುವುದನ್ನು ಕೂಡ ಪ್ರವಾದಿ ಮುಹಮ್ಮದ್(ﷺ)ರು ವಿರೋಧಿಸಿದರು.(2)

ಹತ್ಯೆಯನ್ನು ಪ್ರವಾದಿ ಮುಹಮ್ಮದ್(ﷺ)ರು ಎರಡನೇ ಮಹಾಪಾಪವೆಂದು ಪಟ್ಟಿ ಮಾಡಿದರು.(3) {**ತೀರ್ಪು ನೀಡುವ ದಿನದಂದು ಜನರ ಅಪರಾಧಗಳ ಪೈಕಿ ಮೊಟ್ಟಮೊದಲು ವಿಚಾರಣೆಗೆ ಕೈಗೆತ್ತಿಕೊಳ್ಳುವ ವಿಷಯಗಳಲ್ಲೊಂದು ರಕ್ತಪಾತವಾಗಿರುವುದು**}(4) ಎಂದು ಅವರು ಎಚ್ಚರಿಕೆ ನೀಡಿದರು.(5)

ಪ್ರಾಣಿಗಳೊಂದಿಗೆ ಕೂಡ ಕರುಣೆ ತೋರಿಸಬೇಕು ಮತ್ತು ಅವುಗಳನ್ನು ಹಿಂಸಿಸಬಾರದೆಂದು ಇಸ್ಲಾಮ್ ಹೇಳುತ್ತದೆ. ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {**ಒಂದು ಬೆಕ್ಕನ್ನು ಬಂಧಿಸಿಟ್ಟು ಅದನ್ನು ಸಾಯಿಸಿದ ಒಬ್ಬ ಮಹಿಳೆಯನ್ನು ಅಲ್ಲಾಹು ಶಿಕ್ಷಿಸಿದನು. ಈ ಅಪರಾಧದ ನಿಮಿತ್ತ ಆಕೆಯನ್ನು ನರಕಾಗ್ನಿಗೆ ತಳ್ಳಲಾಯಿತು. ಅದನ್ನು ಬಂಧಿಸಿಟ್ಟ ಸಂದರ್ಭದಲ್ಲಿ ಆಕೆ ಅದಕ್ಕೆ ಆಹಾರ ಕೊಡಲಿಲ್ಲ ಮತ್ತು ಅದು ಸ್ವತಃ ಆಹಾರವನ್ನು ಹುಡುಕಿಕೊಂಡು ಹೋಗಲೂ ಆಕೆ ಬಿಡಲಿಲ್ಲ.**}(6)

ದಾಹದಿಂದ ಬಳಲುತ್ತಿದ್ದ ಒಂದು ನಾಯಿಗೆ ನೀರು ಕುಡಿಸಿದ ಕಾರಣಕ್ಕಾಗಿ ಅಲ್ಲಾಹು ಒಬ್ಬ ವ್ಯಕ್ತಿಯ ಪಾಪಗಳನ್ನು ಮನ್ನಿಸಿ ಆತನನ್ನು ಸ್ವರ್ಗಕ್ಕೆ ಸೇರಿಸಿದನೆಂದು ಅವರು ಹೇಳಿದರು. ಅನುಯಾಯಿಗಳು ಕೇಳಿದರು: "ಓ ಅಲ್ಲಾಹನ ಸಂದೇಶವಾಹಕರೇ, ಪ್ರಾಣಿಗಳಿಗೆ ಕರುಣೆ ತೋರಿಸಿದ ಕಾರಣಕ್ಕಾಗಿ ನಮಗೆ ಪುಣ್ಯ ಸಿಗುವುದೇ?" ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {**ಹೌದು, ಜೀವವಿರುವ ಯಾವುದೇ ವಸ್ತುವಿಗೆ ಕರುಣೆ ತೋರಿಸಿದರೂ ಅದಕ್ಕೆ ಪುಣ್ಯವಿದೆ.**}(7)

ಅದೇ ರೀತಿ, ಆಹಾರಕ್ಕಾಗಿ ಪ್ರಾಣಿಯನ್ನು ಕೊಲ್ಲುವಾಗ ಅದಕ್ಕೆ ಭಯ ಮತ್ತು ನೋವನ್ನು ಕನಿಷ್ಠಗೊಳಿಸುವ ವಿಧಾನದಲ್ಲಿ ಅದನ್ನು ಕೊಯ್ಯಬೇಕೆಂದು ಇಸ್ಲಾಮ್ ಆದೇಶಿಸುತ್ತದೆ. ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {**ನೀವು ಪ್ರಾಣಿಯನ್ನು ಕೊಯ್ಯುವಾಗ ಅತ್ಯುತ್ತಮವಾದ ವಿಧಾನದಲ್ಲಿ ಕೊಯ್ಯಿರಿ. ಕೊಯ್ಯುವಾತನು ಪ್ರಾಣಿಯ ನೋವನ್ನು ಕನಿಷ್ಠಗೊಳಿಸುವುದಕ್ಕಾಗಿ ತನ್ನ ಚೂರಿಯನ್ನು ಹರಿತಗೊಳಿಸಲಿ.**}(8)

---

1. *ಸಹೀಹುಲ್ ಬುಖಾರಿ* #3166 ಮತ್ತು *ಇಬ್ನ್ ಮಾಜ* #2686
2. *ಅಬೂದಾವೂದ್* #2675
3. *ಸಹೀಹುಲ್ ಬುಖಾರಿ* #6871 ಮತ್ತು *ಸಹೀಹ್ ಮುಸ್ಲಿಮ್* #88
4. ಅಂದರೆ ಕೊಲ್ಲುವುದು ಮತ್ತು ಗಾಯಗೊಳಿಸುವುದು.
5. *ಸಹೀಹ್ ಮುಸ್ಲಿಮ್* #1678 ಮತ್ತು *ಸಹೀಹುಲ್ ಬುಖಾರಿ* #6533
6. *ಸಹೀಹ್ ಮುಸ್ಲಿಮ್* #2422 ಮತ್ತು *ಸಹೀಹುಲ್ ಬುಖಾರಿ* #2365
7. ಈ ವಚನವನ್ನು ಪುಟ 50ರಲ್ಲಿ ವಿಸ್ತೃತವಾಗಿ ನೀಡಲಾಗಿದೆ. *ಸಹೀಹ್ ಮುಸ್ಲಿಮ್* #2244 ಮತ್ತು *ಸಹೀಹುಲ್ ಬುಖಾರಿ* #2466
8. *ಸಹೀಹ್ ಮುಸ್ಲಿಮ್* #1955 ಮತ್ತು *ತಿರ್ಮಿದಿ* #1409

ಈ ಮೇಲಿನ ವಚನಗಳ ಹಾಗೂ ಇನ್ನಿತರ ಇಸ್ಲಾಮೀ ಪಠ್ಯಗಳ ಬೆಳಕಿನಲ್ಲಿ, ಅಮಾಯಕ ನಾಗರಿಕರ ಮನದಲ್ಲಿ ಭಯವನ್ನು ಹುಟ್ಟಿಸುವುದು, ಕಟ್ಟಡ ಹಾಗೂ ಆಸ್ತಿಪಾಸ್ತಿಗಳನ್ನು ನಾಶಮಾಡುವುದು, ಅಮಾಯಕ ಪುರುಷರ, ಮಹಿಳೆಯರ ಮತ್ತು ಮಕ್ಕಳ ಮೇಲೆ ಬಾಂಬ್ ಸುರಿಸಿ ಅವರನ್ನು ಹತ್ಯೆ ಮಾಡುವುದು ಅಥವಾ ಗಾಯಗೊಳಿಸುವುದು ಇಸ್ಲಾಮಿನ ಪ್ರಕಾರ ನಿಷಿದ್ಧವಾಗಿದೆ ಹಾಗೂ ಹೇಯ ಕೃತ್ಯಗಳಾಗಿವೆ. ಮುಸ್ಲಿಮರು ಶಾಂತಿ, ಕರುಣೆ ಮತ್ತು ಕ್ಷಮೆಯ ಧರ್ಮವನ್ನು ಅನುಸರಿಸುವವರಾಗಿದ್ದಾರೆ. ಮುಸ್ಲಿಮರ ಹೆಸರಲ್ಲಿ ಥಳಕು ಹಾಕಲಾಗುತ್ತಿರುವ ಹಿಂಸಾಕೃತ್ಯಗಳೊಂದಿಗೆ ಬಹುಸಂಖ್ಯಾತ ಮುಸ್ಲಿಮರಿಗೆ ಯಾವುದೇ ಸಂಬಂಧವಿಲ್ಲ. ಯಾರಾದರೂ ಒಬ್ಬ ಮುಸ್ಲಿಮ್ ವ್ಯಕ್ತಿ ಭಯೋತ್ಪಾದನಾ ಕೃತ್ಯವೆಸಗಿದರೆ ಇಸ್ಲಾಮಿನ ನಿಯಮಗಳನ್ನು ಉಲ್ಲಂಘಿಸಿದ ಕಾರಣ ಅವನು ಮಾತ್ರ ಅಪರಾಧಿಯಾಗುತ್ತಾನೆ.

## ಇಸ್ಲಾಮಿನಲ್ಲಿ ಮಾನವ ಹಕ್ಕುಗಳು ಮತ್ತು ನ್ಯಾಯ

ಇಸ್ಲಾಮ್ ಒಬ್ಬ ವ್ಯಕ್ತಿಗೆ ಅನೇಕ ಮಾನವ ಹಕ್ಕುಗಳನ್ನು ನೀಡುತ್ತದೆ. ಇಸ್ಲಾಮ್ ಒಬ್ಬ ವ್ಯಕ್ತಿಗೆ ನೀಡುವ ಮಾನವ ಹಕ್ಕುಗಳ ಪೈಕಿ ಕೆಲವು ಹೀಗಿವೆ:

ಇಸ್ಲಾಮೀ ರಾಷ್ಟ್ರದಲ್ಲಿ ವಾಸಿಸುವ ಎಲ್ಲ ಪೌರರ –ಅವರು ಮುಸ್ಲಿಮರಾಗಿರಲಿ, ಅಲ್ಲದಿರಲಿ– ಜೀವ ಮತ್ತು ಆಸ್ತಿಯನ್ನು ಪವಿತ್ರವೆಂದು ಪರಿಗಣಿಸಲಾಗುತ್ತದೆ. ಇಸ್ಲಾಮ್ ಘನತೆಯನ್ನು ಕೂಡ ರಕ್ಷಿಸುತ್ತದೆ. ಆದ್ದರಿಂದ ಇಸ್ಲಾಮಿನ ಪ್ರಕಾರ ಯಾರನ್ನಾದರೂ ಅವಹೇಳನ ಮಾಡುವುದು ಅಥವಾ ಗೇಲಿ ಮಾಡುವುದು ನಿಷಿದ್ಧವಾಗಿದೆ. ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: **{ಖಂಡಿತವಾಗಿಯೂ ನಿಮ್ಮ ರಕ್ತ, ಆಸ್ತಿ ಮತ್ತು ಘನತೆಗಳು ಪವಿತ್ರವಾಗಿವೆ.}**[1]

ಇಸ್ಲಾಮಿನಲ್ಲಿ ಜನಾಂಗೀಯತೆಯಿಲ್ಲ. ಯಾಕೆಂದರೆ ಕುರ್‌ಆನ್ ಮನುಷ್ಯ ಸಮಾನತೆಯನ್ನು ಬೋಧಿಸುತ್ತದೆ:

> **﴾ಓ ಮನುಷ್ಯರೇ! ಖಂಡಿತವಾಗಿಯೂ ನಾವು ನಿಮ್ಮನ್ನು ಒಂದು ಗಂಡು ಮತ್ತು ಒಂದು ಹೆಣ್ಣಿನಿಂದ ಸೃಷ್ಟಿಸಿರುವೆವು. ನೀವು ಪರಸ್ಪರ ಗುರುತಿಸುವುದಕ್ಕಾಗಿ ನಾವು ನಿಮ್ಮನ್ನು ವಿವಿಧ ಸಮುದಾಯ ಮತ್ತು ಜನಾಂಗಗಳನ್ನಾಗಿ ಮಾಡಿರುವೆವು. ಖಂಡಿತವಾಗಿಯೂ ಅಲ್ಲಾಹುವಿನ ಬಳಿ ನಿಮ್ಮ ಪೈಕಿ ಅತ್ಯಂತ ಗೌರವಾನ್ವಿತನು ನಿಮ್ಮ ಪೈಕಿ ಅತಿಹೆಚ್ಚು ಭಯಭಕ್ತಿ ಪಾಲಿಸುವವನಾಗಿರುವನು.[2] ಖಂಡಿತವಾಗಿಯೂ ಅಲ್ಲಾಹು ಸರ್ವಜ್ಞನೂ ಸೂಕ್ಷ್ಮಜ್ಞಾನಿಯೂ ಆಗಿರುವನು.﴿** (ಕುರ್‌ಆನ್ 49:13)

ಆಸ್ತಿ, ಅಧಿಕಾರ ಅಥವಾ ಜನಾಂಗದ ನಿಮಿತ್ತ ಯಾವುದಾದರೂ ವ್ಯಕ್ತಿಗೆ ಅಥವಾ ದೇಶಕ್ಕೆ ಪರವಾಗಿ ನಿಲ್ಲುವುದನ್ನು ಇಸ್ಲಾಮ್ ವಿರೋಧಿಸುತ್ತದೆ. ದೇವನು ಮನುಷ್ಯರೆಲ್ಲರನ್ನೂ

---

1. *ಸಹೀಹುಲ್ ಬುಖಾರಿ* #1739 ಮತ್ತು *ಮುಸ್ನದ್ ಅಹ್ಮದ್* #2037
2. ಅತಿಹೆಚ್ಚು ಭಯಭಕ್ತಿ ಪಾಲಿಸುವವನು ಎಂದರೆ ಎಲ್ಲ ರೀತಿಯ ಪಾಪಗಳಿಂದಲೂ ಮುಕ್ತನಾಗಿ, ದೇವನು ಆದೇಶಿಸಿದ ಎಲ್ಲ ಸತ್ಕರ್ಮಗಳನ್ನು ಮಾಡುವವನೂ, ದೇವನನ್ನು ಭಯಪಡುವವನೂ, ಪ್ರೀತಿಸುವವನೂ ಆಗಿರುವನು.

ಸಮಾನವಾಗಿ ಸೃಷ್ಟಿಸಿರುವನು. ಮನುಷ್ಯರನ್ನು ಕೇವಲ ಅವರ ವಿಶ್ವಾಸ ಹಾಗೂ ಭಯಭಕ್ತಿಯ ಮೇಲೆ ಬೇರ್ಪಡಿಸಬೇಕಾಗಿದೆ. ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {**ಓ ಜನರೇ, ನಿಮ್ಮ ದೇವರು ಒಬ್ಬನು ಮತ್ತು ನಿಮ್ಮ ತಂದೆಯೂ ಒಬ್ಬನು. ಅರಬನಿಗೆ ಅರಬೇತರನ ಮೇಲೆ ಯಾವುದೇ ಶ್ರೇಷ್ಠತೆಯಿಲ್ಲ ಮತ್ತು ಅರಬೇತರನಿಗೆ ಅರಬನ ಮೇಲೂ ಯಾವುದೇ ಶ್ರೇಷ್ಠತೆಯಿಲ್ಲ. ಕೆಂಪು ಬಣ್ಣದವನಿಗೆ** (ಅಂದರೆ ಕೆಂಪು ಮಿಶ್ರಿತ ಬಿಳಿಬಣ್ಣದವನು) **ಕರಿಯನ ಮೇಲೆ ಯಾವುದೇ ಶ್ರೇಷ್ಠತೆಯಿಲ್ಲ ಮತ್ತು ಕರಿಯನಿಗೆ ಕೆಂಪು ಬಣ್ಣದವನ**[1] **ಮೇಲೆ ಯಾವುದೇ ಶ್ರೇಷ್ಠತೆಯಿಲ್ಲ. ಭಯಭಕ್ತಿಯ ಮಾನದಂಡದಲ್ಲೇ ಹೊರತು.**}[2]



ಜನಾಂಗೀಯತೆಯು ಇಂದು ಜಗತ್ತು ಎದುರಿಸುತ್ತಿರುವ ಪ್ರಮುಖ ಸಮಸ್ಯೆಗಳ ಪೈಕಿ ಒಂದಾಗಿದೆ. ಒಬ್ಬ ಮನುಷ್ಯನನ್ನು ಚಂದ್ರಲೋಕಕ್ಕೆ ಕಳುಹಿಸಲು ಅಭಿವೃದ್ಧಿ ಹೊಂದಿದ ಜಗತ್ತಿಗೆ ಸಾಧ್ಯವಿದೆ. ಆದರೆ ತನ್ನ ಸಹ ಜೀವಿಯನ್ನು ದ್ವೇಷಿಸದಂತೆ ಮತ್ತು ಅವನೊಂದಿಗೆ ಹೋರಾಡದಂತೆ ಮಾಡಲು ಸಾಧ್ಯವಿಲ್ಲ. ಜನಾಂಗೀಯತೆಯನ್ನು ಹೇಗೆ ನಿರ್ಮೂಲನಗೊಳಿಸಬಹುದು ಎಂಬುದಕ್ಕೆ ಪ್ರವಾದಿ ಮುಹಮ್ಮದ್(ﷺ)ರ ಕಾಲದಿಂದಲೇ ಇಸ್ಲಾಮ್ ಸ್ಪಷ್ಟವಾದ ಉದಾಹರಣೆಯನ್ನು ನೀಡುತ್ತಾ ಬಂದಿದೆ. ಮಕ್ಕಾದೆಡೆಗಿರುವ ವಾರ್ಷಿಕ ತೀರ್ಥಯಾತ್ರೆ (ಹಜ್ಜ್)ಯು ನಿಜವಾದ ಇಸ್ಲಾಮೀ ಭ್ರಾತೃತ್ವವನ್ನು ತೋರಿಸುತ್ತದೆ. ಅಲ್ಲಿ ಜಗತ್ತಿನ ಎಲ್ಲ ಭಾಗಗಳಿಂದ ಬರುವ ಮುಸ್ಲಿಮರು ಒಟ್ಟುಗೂಡುತ್ತಾರೆ.

ಇಸ್ಲಾಮ್ ನ್ಯಾಯದ ಧರ್ಮವಾಗಿದೆ. ದೇವನು ಹೇಳುತ್ತಾನೆ:

> ﴾**ನಂಬಿಕೆಯೊಂದಿಗೆ ವಹಿಸಿಕೊಡಲಾದ ಅಮಾನತ್ತುಗಳನ್ನು ಅವುಗಳ ಹಕ್ಕುದಾರರಿಗೆ ಕೊಡಬೇಕೆಂದೂ, ಜನರ ಮಧ್ಯೆ ತೀರ್ಪು ನೀಡುವುದಾದರೆ ನ್ಯಾಯಬದ್ಧವಾಗಿ ತೀರ್ಪು ನೀಡಬೇಕೆಂದೂ ಅಲ್ಲಾಹು ನಿಮ್ಮೊಂದಿಗೆ ಆಜ್ಞಾಪಿಸುತ್ತಿರುವನು....**﴿ (ಕುರ್‌ಆನ್ 4:58)

ದೇವನು ಇನ್ನೊಂದು ಕಡೆ ಹೇಳುತ್ತಾನೆ:

> ﴾**...ಮತ್ತು ನ್ಯಾಯ ಪಾಲಿಸಿರಿ. ಖಂಡಿತವಾಗಿಯೂ ಅಲ್ಲಾಹು ನ್ಯಾಯ ಪಾಲಿಸುವವರನ್ನು ಇಷ್ಟಪಡುವನು.**﴿ (ಕುರ್‌ಆನ್ 49:9)

---

1. ಪ್ರವಾದಿ ವಚನಗಳಲ್ಲಿ ಪ್ರಸ್ತಾಪಿಸಲಾಗಿರುವ ಈ ಬಣ್ಣಗಳು ಸಾಂಕೇತಿಕ ಮಾತ್ರವಾಗಿವೆ. ಇದರ ಅರ್ಥವೇನೆಂದರೆ ಒಬ್ಬ ವ್ಯಕ್ತಿಯ ಬಣ್ಣದಿಂದಾಗಿ, ಅದು ಬಿಳಿ, ಕಪ್ಪು, ಕೆಂಪು ಅಥವಾ ಇನ್ನಾವುದೇ ಬಣ್ಣವಾಗಿರಲಿ, ಅದರಿಂದ ಇಸ್ಲಾಮ್ ಅವನನ್ನು ಇತರರಿಂದ ಶ್ರೇಷ್ಠನೆಂದು ಪರಿಗಣಿಸುವುದಿಲ್ಲ ಎಂದಾಗಿದೆ.
2. ಮುಸ್ನದ್ ಅಹ್ಮದ್ #22978

ನಮಗೆ ಯಾರಲ್ಲಾದರೂ ದ್ವೇಷವಿದ್ದರೆ ಅವರೊಂದಿಗೆ ಕೂಡ ನ್ಯಾಯ ಪಾಲಿಸಬೇಕೆಂದು ಇಸ್ಲಾಮ್ ಬೋಧಿಸುತ್ತದೆ. ದೇವನು ಹೇಳುತ್ತಾನೆ:

> **﴾...ಒಂದು ಜನತೆಯೊಂದಿಗೆ ನಿಮಗಿರುವ ರೋಷವು ನ್ಯಾಯ ಪಾಲಿಸದಿರಲು ನಿಮ್ಮನ್ನು ಪ್ರೇರೇಪಿಸದಿರಲಿ. ನ್ಯಾಯ ಪಾಲಿಸಿರಿ. ಅದು ಧರ್ಮನಿಷ್ಠೆಗೆ ಅತ್ಯಂತ ನಿಕಟವಾಗಿದೆ....﴿** (ಕುರ್‌ಆನ್ 5:8)

ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {**ಜನರೇ, ಅನ್ಯಾಯದ ಬಗ್ಗೆ ಎಚ್ಚರ ವಹಿಸಿರಿ**[1] **ಯಾಕೆಂದರೆ ತೀರ್ಪು ನೀಡುವ ದಿನದಂದು ಅನ್ಯಾಯವು ಕತ್ತಲೆಯಾಗಿ ಪರಿಣಮಿಸುವುದು.**}[2]

ಯಾರಿಗೆ ಅವರ ಹಕ್ಕುಗಳು ಇಹಲೋಕದಲ್ಲಿ ಸಿಗಲಿಲ್ಲವೋ ಅವರಿಗೆ ಪರಲೋಕದಲ್ಲಿ ಅವರ ಹಕ್ಕುಗಳನ್ನು ಪೂರೈಸಿಕೊಡಲಾಗುವುದು. ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {**ಯಾರ ಹಕ್ಕುಗಳು ಸಂದಾಯವಾಗದೆ ಉಳಿದಿವೆಯೋ ಅವರಿಗೆ ಅವರ ಹಕ್ಕುಗಳನ್ನು ತೀರ್ಪು ನೀಡುವ ದಿನದಂದು ನೀಡಲಾಗುವುದು** (ಮತ್ತು ಅನ್ಯಾಯಗಳನ್ನು ಸರಿಪಡಿಸಲಾಗುವುದು).}[3]

## ಇಸ್ಲಾಮಿನಲ್ಲಿ ಮಹಿಳೆಯರ ಸ್ಥಾನಮಾನವೇನು?

ಇಸ್ಲಾಮ್ ಮಹಿಳೆಯನ್ನು, ಆಕೆ ವಿವಾಹಿತೆಯಾಗಿದ್ದರೂ ಅವಿವಾಹಿತೆಯಾಗಿದ್ದರೂ, ತನ್ನ ಆಸ್ತಿ ಮತ್ತು ಆದಾಯಗಳನ್ನು ಯಾವುದೇ ಪೋಷಕರ (ಅಂದರೆ ತಂದೆ, ಗಂಡ ಅಥವಾ ಇತರ ಯಾರಾದರೊಬ್ಬರ) ಅಗತ್ಯವಿಲ್ಲದೆ ಸ್ವಂತವಾಗಿ ಸ್ವಾಧೀನದಲ್ಲಿಟ್ಟುಕೊಳ್ಳುವ ಹಾಗೂ ವಿಲೇವಾರಿ ಮಾಡುವ ಹಕ್ಕನ್ನು ಹೊಂದಿರುವ ಒಬ್ಬ ಸ್ವತಂತ್ರ ವ್ಯಕ್ತಿಯಾಗಿ ಕಾಣುತ್ತದೆ. ಖರೀದಿಸುವ ಮತ್ತು ಮಾರುವ, ಉಡುಗೊರೆ ಅಥವಾ ದಾನಧರ್ಮ ನೀಡುವ ಮತ್ತು ತನ್ನ ಸಂಪತ್ತನ್ನು ತನ್ನಿಷ್ಟದಂತೆ ವ್ಯಯಿಸುವ ಹಕ್ಕು ಆಕೆಗಿದೆ. ವಿವಾಹದ ಸಂದರ್ಭ ವರನು ಆಕೆಗೆ ನೀಡುವ ವಧುದಕ್ಷಿಣೆಯು ಆಕೆಯ ಖಾಸಗಿ ಆಸ್ತಿಯಾಗಿದೆ. ಅದರಲ್ಲಿ ಗಂಡನಿಗೆ ಯಾವುದೇ ಹಕ್ಕಿಲ್ಲ. ವಿವಾಹವಾದ ಬಳಿಕ ತನ್ನ ಹೆಸರಿನೊಂದಿಗೆ ಗಂಡನ ಹೆಸರನ್ನು ಸೇರಿಸಿಕೊಳ್ಳುವ ಬದಲು ತನ್ನ ಮನೆತನದ ಹೆಸರನ್ನೇ ಉಳಿಸಿಕೊಳ್ಳುವ ಹಕ್ಕು ಆಕೆಗಿದೆ.



ಪತ್ನಿಯೊಂದಿಗೆ ಉತ್ತಮವಾಗಿ ವರ್ತಿಸಬೇಕೆಂದು ಇಸ್ಲಾಮ್ ಆದೇಶಿಸುತ್ತದೆ. ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {**ನಿಮ್ಮ ಪೈಕಿ ತಮ್ಮ ಪತ್ನಿಯರೊಂದಿಗೆ ಅತ್ಯುತ್ತಮವಾಗಿ ವರ್ತಿಸುವವರು ಯಾರೋ ಅವರೇ ನಿಮ್ಮ ಪೈಕಿ ಅತ್ಯುತ್ತಮರಾಗಿದ್ದಾರೆ.**}[4]

---

1. ಅಂದರೆ ದಬ್ಬಾಳಿಕೆ ಮಾಡುವುದು, ಅನ್ಯಾಯವೆಸಗುವುದು ಇತ್ಯಾದಿ.
2. *ಮುಸ್ನದ್ ಅಹ್ಮದ್* #5798 ಮತ್ತು *ಸಹೀಹುಲ್ ಬುಖಾರಿ* #2447
3. *ಸಹೀಹ್ ಮುಸ್ಲಿಮ್* #2582 ಮತ್ತು *ಮುಸ್ನದ್ ಅಹ್ಮದ್* #7163
4. *ಇಬ್ನ್ ಮಾಜ* #1978 ಮತ್ತು *ತಿರ್ಮಿದಿ* #3895

ಇಸ್ಲಾಮಿನಲ್ಲಿ ತಾಯಿಗೆ ಮಹತ್ವವಾದ ಸ್ಥಾನವಿದೆ. ಆಕೆಯೊಂದಿಗೆ ಅತ್ಯುತ್ತಮವಾಗಿ ವರ್ತಿಸುವಂತೆ ಇಸ್ಲಾಮ್ ಆದೇಶಿಸುತ್ತದೆ. **ಒಬ್ಬ ವ್ಯಕ್ತಿ ಪ್ರವಾದಿ ಮುಹಮ್ಮದ್(ﷺ)ರ ಬಳಿಗೆ ಬಂದು ಕೇಳಿದರು: "ಓ ಅಲ್ಲಾಹನ ಸಂದೇಶವಾಹಕರೇ, ನಾನು ನನ್ನ ಬದುಕಿನಲ್ಲಿ ಉತ್ತಮ ಬಾಂಧವ್ಯವನ್ನು ಹೊಂದಲು ಅತ್ಯಂತ ಅರ್ಹರಾಗಿರುವುದು ಯಾರು?" ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {ನಿನ್ನ ತಾಯಿ}. ಆ ವ್ಯಕ್ತಿ ಕೇಳಿದರು: "ನಂತರ ಯಾರು?" ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {ನಿನ್ನ ತಾಯಿ}. ಆ ವ್ಯಕ್ತಿ ಕೇಳಿದರು: "ನಂತರ ಯಾರು?" ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {ನಿನ್ನ ತಾಯಿ}. ಆ ವ್ಯಕ್ತಿ ಕೇಳಿದರು: "ನಂತರ ಯಾರು?" ಪ್ರವಾದಿ ಮುಹಮ್ಮದ್(ﷺ)ರು ಹೇಳಿದರು: {ನಿನ್ನ ತಂದೆ}.**[1]

## ಇಸ್ಲಾಮಿನಲ್ಲಿ ಕುಟುಂಬ

ನಾಗರಿಕತೆಯ ಮೂಲ ಘಟಕವಾಗಿರುವ ಕುಟುಂಬವು ಇಂದು ಶಿಥಿಲಗೊಳ್ಳುತ್ತಿದೆ. ಇಸ್ಲಾಮಿನ ಕುಟುಂಬ ವ್ಯವಸ್ಥೆಯು ಪತಿ, ಪತ್ನಿ, ಮಕ್ಕಳು ಮತ್ತು ಸಂಬಂಧಿಕರ ಹಕ್ಕುಗಳನ್ನು ಸೂಕ್ಷ್ಮ ಸಮತೋಲನದಲ್ಲಿ ತರುತ್ತದೆ. ಕ್ರಮಬದ್ಧವಾದ ಕುಟುಂಬ ವ್ಯವಸ್ಥೆಯ ಚೌಕಟ್ಟಿನೊಳಗೆ ನಿಸ್ವಾರ್ಥ ಸ್ವಭಾವ, ಔದಾರ್ಯ ಮತ್ತು ಪ್ರೀತಿಯನ್ನು ಅದು ಪೋಷಿಸುತ್ತದೆ. ಸ್ಥಿರ ಕುಟುಂಬವು ಒದಗಿಸುವ ಶಾಂತಿ ಮತ್ತು ಸುರಕ್ಷಿತತೆಗೆ ಹೆಚ್ಚಿನ ಮೌಲ್ಯವಿದೆ ಮತ್ತು ಅದನ್ನು ಕುಟುಂಬ ಸದಸ್ಯರ ಆಧ್ಯಾತ್ಮಿಕ ಬೆಳವಣಿಗೆಗೆ ಅತ್ಯಾವಶ್ಯಕವೆಂದು ಕಾಣಲಾಗುತ್ತದೆ. ವಿಸ್ತೃತ ಕುಟುಂಬಗಳ ಅಸ್ತಿತ್ವದಿಂದಾಗಿ ಮತ್ತು ಭದ್ರವಾಗಿ ಬೆಳೆಸಲಾಗುವ ಮಕ್ಕಳಿಂದಾಗಿ ಸೌಹಾರ್ದಯುತವಾದ ಸಾಮಾಜಿಕ ವ್ಯವಸ್ಥೆಯು ಸೃಷ್ಟಿಸಲ್ಪಡುತ್ತದೆ.

## ಮುಸ್ಲಿಮರು ಹಿರಿಯರೊಂದಿಗೆ ಹೇಗೆ ವರ್ತಿಸುತ್ತಾರೆ?

ಇಸ್ಲಾಮೀ ಜಗತ್ತಿನಲ್ಲಿ ವೃದ್ಧಾಶ್ರಮಗಳು ಅತ್ಯಪೂರ್ವವಾಗಿದೆ. ಇಸ್ಲಾಮಿನ ಪ್ರಕಾರ ವೃದ್ಧಾಪ್ಯವೆಂಬ ಪ್ರಯಾಸಕರ ಘಟ್ಟದಲ್ಲಿರುವ ಹೆತ್ತವರನ್ನು ಆರೈಕೆ ಮಾಡುವುದು ಒಂದು ಗೌರವ, ಅನುಗ್ರಹ ಹಾಗೂ ಆಧ್ಯಾತ್ಮಿಕ ಬೆಳವಣಿಗಿರುವ ಒಂದು ಅವಕಾಶವಾಗಿದೆ. ಇಸ್ಲಾಮಿನ ಪ್ರಕಾರ ಹೆತ್ತವರಿಗಾಗಿ ಕೇವಲ ಪ್ರಾರ್ಥನೆ ಮಾಡಿದರೆ ಮಾತ್ರ ಸಾಲದು. ಬದಲಾಗಿ ಅಮಿತ ವಾತ್ಸಲ್ಯದೊಂದಿಗೆ ಅವರೊಂದಿಗೆ ವರ್ತಿಸಬೇಕು. ನಾವು ಅಸಹಾಯಕ ಮಕ್ಕಳಾಗಿದ್ದಾಗ ಅವರು ತಮ್ಮ ಇತರೆಲ್ಲ ವಿಷಯಗಳಿಗಿಂತಲೂ ನಮಗೆ ಆದ್ಯತೆ ನೀಡಿದ್ದನ್ನು ನಾವು ಸ್ಮರಿಸಬೇಕು. ಮುಸ್ಲಿಮ್ ಮಾತಾಪಿತರು ವೃದ್ಧಾಪ್ಯ ತಲುಪುವಾಗ ಅವರೊಂದಿಗೆ ಕರುಣೆಯಿಂದ, ಸೌಮ್ಯತೆಯಿಂದ ಮತ್ತು ನಿಸ್ವಾರ್ಥತೆಯಿಂದ ವರ್ತಿಸಲಾಗುತ್ತದೆ.

---

1. *ಸಹೀಹ್ ಮುಸ್ಲಿಮ್* #2548 ಮತ್ತು *ಸಹೀಹುಲ್ ಬುಖಾರಿ* #5971

ಇಸ್ಲಾಮಿನ ಪ್ರಕಾರ, ಹೆತ್ತವರ ಸೇವೆ ಮಾಡುವುದು ಪ್ರಾರ್ಥನೆಯ ನಂತರವಿರುವ ಎರಡನೆ ಕರ್ತವ್ಯವಾಗಿದೆ. ಮಕ್ಕಳಿಂದ ಸೇವೆಯನ್ನು ನಿರೀಕ್ಷಿಸುವುದು ಹೆತ್ತವರ ಹಕ್ಕಾಗಿದೆ. ವೃದ್ಧಾಪ್ಯದ ಸಂದರ್ಭದಲ್ಲಿ ಅವರಿಗೆ ಅರಿವಿಲ್ಲದೆ ಸಂಭವಿಸುವ ಯಾವುದಕ್ಕೂ ಅವರೊಂದಿಗೆ ಅಸಹನೆ ಪ್ರಕಟಿಸುವುದನ್ನು ಇಸ್ಲಾಮ್ ವಿರೋಧಿಸುತ್ತದೆ.

ದೇವನು ಹೇಳುತ್ತಾನೆ:

> **﴾ನೀವು ಅವನ ಹೊರತು ಬೇರೆ ಯಾರನ್ನೂ ಆರಾಧಿಸದಿರಲು ಮತ್ತು ಮಾತಾಪಿತರಿಗೆ ಒಳಿತನ್ನು ಮಾಡಲು ತಮ್ಮ ಪ್ರಭು ವಿಧಿಸಿರುವನು. ಅವರ (ಮಾತಾಪಿತರ) ಪೈಕಿ ಒಬ್ಬರು ಅಥವಾ ಇಬ್ಬರೂ ತಮ್ಮ ಬಳಿ ವೃದ್ಧಾಪ್ಯವನ್ನು ತಲುಪಿದರೆ ಅವರೊಂದಿಗೆ 'ಛೆ' ಎಂದು ಹೇಳುವುದಾಗಲಿ, ಅವರನ್ನು ಗದರಿಸುವುದಾಗಲಿ ಮಾಡದಿರಿ. ಗೌರವದಿಂದ ಕೂಡಿದ ಮಾತುಗಳನ್ನಷ್ಟೇ ಅವರೊಂದಿಗೆ ಹೇಳಿರಿ. ಕರುಣೆಯಿಂದಿರುವ ವಿನಮ್ರತೆಯ ರೆಕ್ಕೆಯನ್ನು ಅವರಿಗೋಸ್ಕರ ತಗ್ಗಿಸಿಕೊಡಿರಿ ಮತ್ತು 'ನನ್ನ ಪ್ರಭೂ! ಚಿಕ್ಕಂದಿನಲ್ಲಿ ಅವರು ನನ್ನನ್ನು ಸಾಕಿಸಲಹಿದಂತೆ ಅವರಿಗೆ ದಯೆ ತೋರು' ಎಂದು ಪ್ರಾರ್ಥಿಸಿರಿ.﴿**
> (ಕುರ್‌ಆನ್ 17:23–24)

## ಇಸ್ಲಾಮಿನ ಐದು ಸ್ಥಂಭಗಳು ಯಾವುವು?

ಇಸ್ಲಾಮಿನ ಐದು ಸ್ಥಂಭಗಳು ಮುಸಲ್ಮಾನನ ಜೀವನದ ಚೌಕಟ್ಟಾಗಿದೆ. ಅವು ವಿಶ್ವಾಸದ ಸತ್ಯಸಾಕ್ಷ್ಯ, ನಮಾಝ್, ಝಕಾತ್, ರಮದಾನ್ ತಿಂಗಳಲ್ಲಿ ಉಪವಾಸ ಮತ್ತು ಸಾಧ್ಯವಿರುವವರು ಜೀವನದಲ್ಲೊಂದು ಬಾರಿ ಮಕ್ಕಾದೆಡೆಗೆ ತೀರ್ಥಾಟನೆ ಮಾಡುವುದು.

### 1) ವಿಶ್ವಾಸದ ಸತ್ಯಸಾಕ್ಷ್ಯ

ವಿಶ್ವಾಸದ ಸತ್ಯಸಾಕ್ಷ್ಯ ಎಂದರೆ ದೃಢವಾದ ವಿಶ್ವಾಸದೊಂದಿಗೆ ಲಾ ಇಲಾಲ ಇಲ್ಲಲ್ಲಾಹು ಮುಹಮ್ಮದುರ್ರಸೂಲುಲ್ಲಾಹ್ ಎಂದು ಹೇಳುವುದು. ಇದರ ಅರ್ಥವು, ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ ಮತ್ತು ಮುಹಮ್ಮದ್(ﷺ)ರು ಅಲ್ಲಾಹನ ಸಂದೇಶವಾಹಕರಾಗಿರುವರು ಎಂದಾಗಿದೆ. ಇದರ ಮೊದಲ ಭಾಗ ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ ಎಂದರೆ ಆರಾಧಿಸಲ್ಪಡಲು ಅರ್ಹತೆಯಿರುವುದು ಅಲ್ಲಾಹನಿಗೆ ಮಾತ್ರ. ಅವನಿಗೆ ಸಹಭಾಗಿಗಳಾಗಲಿ, ಸಂತತಿಯಾಗಲಿ ಇಲ್ಲ ಎಂದಾಗಿದೆ. ವಿಶ್ವಾಸದ ಸತ್ಯಸಾಕ್ಷ್ಯವನ್ನು *ಶಹಾದಃ* ಎನ್ನಲಾಗುತ್ತದೆ. ಇಸ್ಲಾಮಿಗೆ ಪರಿವರ್ತನೆ ಹೊಂದಬೇಕಾದರೆ ಒಬ್ಬನು ಇದನ್ನು ದೃಢವಾದ ವಿಶ್ವಾಸದೊಂದಿಗೆ ಹೇಳಬೇಕಾಗಿದೆ. (ಇದನ್ನು 52–53 ಪುಟಗಳಲ್ಲಿ ವಿವರಿಸಲಾಗಿದೆ). ವಿಶ್ವಾಸದ ಸತ್ಯಸಾಕ್ಷ್ಯವು ಇಸ್ಲಾಮಿನ ಅತಿ ಪ್ರಮುಖ ಸ್ಥಂಭವಾಗಿದೆ.

## 2) ನಮಾಝ್

ಮುಸ್ಲಿಮರು ದಿನನಿತ್ಯ ಐದು ಬಾರಿ ನಮಾಝ್ ಮಾಡುತ್ತಾರೆ. ಪ್ರತಿಯೊಂದು ನಮಾಝ್ ನಿರ್ವಹಿಸಲ್ಪಡುವ ಸಮಯವು ಕೆಲವು ನಿಮಿಷಗಳಷ್ಟೇ ಆಗಿರುತ್ತದೆ. ಇಸ್ಲಾಮಿನಲ್ಲಿ ನಮಾಝ್ ಎಂಬುದು ಆರಾಧಕನ ಮತ್ತು ಆರಾಧ್ಯನ ಮಧ್ಯೆಯಿರುವ ನೇರ ಕೊಂಡಿಯಾಗಿದೆ. ದೇವನ ಮತ್ತು ಮನುಷ್ಯನ ಮಧ್ಯೆ ಯಾವುದೇ ಮಧ್ಯವರ್ತಿಗಳಿಲ್ಲ.

ನಮಾಝ್ ಮಾಡುವಾಗ ಆಂತರಿಕ ಸಂತೋಷ, ಶಾಂತಿ ಮತ್ತು ನಿರಾಳತೆಯು ಸಿಗುತ್ತದೆ. ದೇವನು ನಮಾಝ್ ಮಾಡುವ ವ್ಯಕ್ತಿಯ ಬಗ್ಗೆ ಸಂತೃಪ್ತನಾಗುತ್ತಾನೆ. ಪ್ರವಾದಿ ಮುಹಮ್ಮದ್ (ﷺ)ರು ಹೇಳಿದರು: {**ಬಿಲಾಲ್, ನಮಾಝ್‌ಗಾಗಿ ಕರೆ ನೀಡು. ನಾವು ಅದರಿಂದ ನಿರಾಳತೆಯನ್ನು ಪಡೆಯೋಣ.**}[1] ಬಿಲಾಲ್ ಮುಹಮ್ಮದ್(ﷺ)ರ ಅನುಯಾಯಿಗಳಲ್ಲಿ ಒಬ್ಬರು. ನಮಾಝ್‌ಗಾಗಿ ಕರೆ ನೀಡುವ ಕೆಲಸವನ್ನು ಅವರಿಗೆ ವಹಿಸಲಾಗಿತ್ತು.

ಪ್ರಭಾತ, ಮಧ್ಯಾಹ್ನ, ಸಂಜೆ, ಸೂರ್ಯಾಸ್ತದ ಸಂದರ್ಭ ಮತ್ತು ರಾತ್ರಿಯಲ್ಲಿ ನಮಾಝ್ ನಿರ್ವಹಿಸಲಾಗುತ್ತದೆ. ಒಬ್ಬ ಮುಸಲ್ಮಾನನಿಗೆ ಹೊಲ, ಕಛೇರಿ, ಕಾರ್ಖಾನೆ, ವಿಶ್ವವಿದ್ಯಾಲಯ ಇತ್ಯಾದಿ ಎಲ್ಲಿ ಬೇಕಾದರೂ ನಮಾಝ್ ನಿರ್ವಹಿಸಬಹುದಾಗಿದೆ.

## 3) *ಝಕಾತ್* (ಕಡ್ಡಾಯ ದಾನ)

ಎಲ್ಲ ವಸ್ತುಗಳೂ ದೇವನಿಗೆ ಸೇರಿದ್ದಾಗಿವೆ. ಆದ್ದರಿಂದ ಸಂಪತ್ತನ್ನು ಮನುಷ್ಯರು ವಿಶ್ವಸ್ಥತೆಯ ಮೇಲೆ ವಶದಲ್ಲಿಟ್ಟುಕೊಳ್ಳಬೇಕಾಗಿದೆ. *ಝಕಾತ್* ಎಂಬ ಪದದ ಮೂಲ ಅರ್ಥವು 'ಶುದ್ಧೀಕರಿಸುವುದು' ಮತ್ತು 'ಬೆಳವಣಿಗೆ ಹೊಂದುವುದು' ಎಂದಾಗಿದೆ. *ಝಕಾತ್* ಕೊಡುವುದು ಎಂದರೆ ನಿರ್ದಿಷ್ಟ ಆಸ್ತಿಯ ಮೇಲೆ ಒಂದು ನಿಶ್ಚಿತ ಭಾಗವನ್ನು ನಿರ್ದಿಷ್ಟ ವರ್ಗಗಳಿಗೆ ಸೇರಿದ ನಿರ್ಗತಿಕರಿಗೆ ನೀಡುವುದಾಗಿದೆ. 85 ಗ್ರಾಂ ಚಿನ್ನದ ಮೌಲ್ಯವನ್ನು ಹೊಂದಿರುವ ಚಿನ್ನ, ಬೆಳ್ಳಿ ಅಥವಾ ನಗದು ಒಂದು ಚಾಂದ್ರಮಾನ ವರ್ಷದ ತನಕ ಒಬ್ಬನ ವಶದಲ್ಲಿದ್ದರೆ ಅದಕ್ಕೆ ಎರಡೂವರೆ ಶೇಕಡ ಝಕಾತ್ ನೀಡಬೇಕಾಗಿದೆ. ನಮ್ಮ ವಶದಲ್ಲಿರುವ ಆಸ್ತಿಯ ಒಂದು ಚಿಕ್ಕ ಭಾಗವನ್ನು ನಿರ್ಗತಿಕರಿಗೆ ನೀಡುವ ಮೂಲಕ ನಮ್ಮ ಆಸ್ತಿಯು ಶುದ್ಧೀಕರಿಸಲ್ಪಡುತ್ತದೆ. ಹಾಗೆಯೇ, ಗಿಡಗಳನ್ನು ಕತ್ತರಿಸಿ ಓರಣಗೊಳಿಸುವಂತೆ ಇದು ಆಸ್ತಿಯನ್ನು ಸಮತೋಲನದಲ್ಲಿಡುತ್ತದೆ ಮತ್ತು ಹೊಸ ಬೆಳವಣಿಗೆಗೆ ಪ್ರಚೋದನೆ ನೀಡುತ್ತದೆ.



ಒಬ್ಬ ವ್ಯಕ್ತಿ ಐಚ್ಛಿಕ ದಾನವಾಗಿ ತನ್ನ ಆಸ್ತಿಯಿಂದ ಎಷ್ಟು ಬೇಕಾದರೂ ದಾನಧರ್ಮ ಮಾಡಬಹುದಾಗಿದೆ.

---

1. *ಸಹೀಹ್ ಮುಸ್ಲಿಮ್* #2548 ಮತ್ತು *ಸಹೀಹುಲ್ ಬುಖಾರಿ* #5971

## 4) ರಮದಾನ್ ತಿಂಗಳಲ್ಲಿ ಉಪವಾಸ



ಪ್ರತಿವರ್ಷ ರಮದಾನ್[1] ತಿಂಗಳಲ್ಲಿ ಮುಸ್ಲಿಮರು ಆಹಾರ, ಪಾನೀಯ ಮತ್ತು ಲೈಂಗಿಕ ಸಂಬಂಧಗಳನ್ನು ಬಿಟ್ಟು ಪ್ರಭಾತದಿಂದ ಸೂರ್ಯಾಸ್ತದ ತನಕ ಉಪವಾಸ ಆಚರಿಸುತ್ತಾರೆ.

ಉಪವಾಸವು ಆರೋಗ್ಯಕ್ಕೆ ಪ್ರಯೋಜನಕಾರಿಯಾಗಿದ್ದರೂ ಅದರ ಪ್ರಮುಖ ಉದ್ದೇಶವು ಆಧ್ಯಾತ್ಮಿಕ ವಿಧಾನದ ಮೂಲಕ ಸ್ವಯಂ ಶುದ್ಧೀಕರಣ ಹೊಂದುವುದಾಗಿದೆ. ಒಂದು ಸಣ್ಣ ಅವಧಿಯವರೆಗಾದರೂ ತನ್ನನ್ನು ತಾನೇ ಐಹಿಕ ಸವಲತ್ತುಗಳಿಂದ ದೂರವಿಡುವ ಮೂಲಕ ಉಪವಾಸ ಆಚರಿಸುವವರಿಗೆ ಹಸಿವಿನಿಂದ ಒದ್ದಾಡುವವರ ಬಗ್ಗೆ ನಿಜವಾದ ಅನುಕಂಪವು ಮೂಡುತ್ತದೆ. ಅದೇ ರೀತಿ ಉಪವಾಸದಿಂದಾಗಿ ಅವನ ಆಧ್ಯಾತ್ಮಿಕ ಜೀವನದಲ್ಲೂ ಪ್ರಗತಿಯುಂಟಾಗುತ್ತದೆ.

## 5) ಮಕ್ಕಾಗೆ ತೀರ್ಥಯಾತ್ರೆ

ಮಕ್ಕಾದೆಡೆಗಿರುವ ವಾರ್ಷಿಕ ತೀರ್ಥಯಾತ್ರೆಯು *(ಹಜ್ಜ್)* ಅದನ್ನು ನಿರ್ವಹಿಸಲು ದೈಹಿಕವಾಗಿ ಮತ್ತು ಆರ್ಥಿಕವಾಗಿ ಸಾಧ್ಯವಿರುವ ಎಲ್ಲರ ಮೇಲೂ ಜೀವನದಲ್ಲೊಂದು ಬಾರಿ



ಮಕ್ಕಾದಲ್ಲಿರುವ ಹರಮ್ ಮಸೀದಿಯಲ್ಲಿ ನಮಾಝ್ ಮಾಡುತ್ತಿರುವ ಯಾತ್ರಾರ್ಥಿಗಳು. ಮುಸ್ಲಿಮರು ನಮಾಝ್ ಮಾಡುವಾಗ ಮುಖ ಮಾಡುವ ಕಅ್‌ಬಾ (ಚಿತ್ರದಲ್ಲಿ ಕಾಣುವ ಕಪ್ಪು ಕಟ್ಟಡ) ಈ ಮಸೀದಿಯಲ್ಲಿದೆ. ಕಅ್‌ಬಾ ಆರಾಧನಾ ಸ್ಥಳವಾಗಿದೆ. ಇದನ್ನು ನಿರ್ಮಿಸಲು ಪ್ರವಾದಿಗಳಾದ ಅಬ್ರಹಾಮ್ ಮತ್ತು ಇಷ್ಮಾಯೇಲರಿಗೆ ದೇವನು ಆಜ್ಞೆ ನೀಡಿದ್ದನು.

---

1. ರಮದಾನ್ ಎಂಬುದು ಇಸ್ಲಾಮೀ ಕ್ಯಾಲೆಂಡರ್‌ನ ಒಂಬತ್ತನೇ ತಿಂಗಳಾಗಿದೆ.

ಕಡ್ಡಾಯವಾಗಿದೆ. ಪ್ರತಿವರ್ಷವೂ ಜಗತ್ತಿನ ಎಲ್ಲ ಮೂಲೆಗಳಿಂದಲೂ ಲಕ್ಷಾಂತರ ಜನರು *ಹಜ್ಜ್* ನಿರ್ವಹಿಸಲು ಮಕ್ಕಾದೆಡೆಗೆ ಹೋಗುತ್ತಾರೆ. ಮಕ್ಕಾವನ್ನು ವರ್ಷದ ಯಾವುದೇ ತಿಂಗಳಲ್ಲಿ ಸಂದರ್ಶಿಸಬಹುದಾದರೂ *ಹಜ್ಜ್* ನಿರ್ವಹಿಸಬೇಕಾದುದು ಇಸ್ಲಾಮೀ ಕ್ಯಾಲೆಂಡರ್‌ನ 12ನೇ ತಿಂಗಳಲ್ಲಾಗಿದೆ. ಪುರುಷರು ವಿಶೇಷ ಸರಳ ಉಡುಪನ್ನು ಧರಿಸುತ್ತಾರೆ. ಇದರಿಂದಾಗಿ ಜನರ ಮಧ್ಯೆಯಿರುವ ವರ್ಗ ಹಾಗೂ ಸಾಂಸ್ಕೃತಿಕ ಭಿನ್ನತೆಗಳು ನಿವಾರಣೆಯಾಗುತ್ತದೆ ಮತ್ತು ದೇವನ ಮುಂದೆ ಎಲ್ಲರೂ ಸಮಾನರಾಗಿ ನಿಲ್ಲುತ್ತಾರೆ.

ಕಅ್‌ಬಾವನ್ನು ಏಳು ಬಾರಿ ಪ್ರದಕ್ಷಿಣೆ ಮಾಡುವುದು ಮತ್ತು ಹಾಜರ್ (ಪ್ರವಾದಿ ಇಷ್ಮಾಯೇಲ್‌ರ ತಾಯಿ) ಮಾಡಿದಂತೆ ಸಫಾ ಮತ್ತು ಮರ್ವಾ ಎಂಬ ಎರಡು ಬೆಟ್ಟಗಳ ಮಧ್ಯೆ ಏಳು ಬಾರಿ ಸಾಗುವುದು *ಹಜ್ಜ್* ಕರ್ಮಗಳ ಪೈಕಿ ಕೆಲವಾಗಿವೆ. ತರುವಾಯ ಯಾತ್ರಾರ್ಥಿಗಳು ಅರಫಾತ್‌ನಲ್ಲಿ[1] ಒಟ್ಟುಗೂಡಿ ದೇವನೊಂದಿಗೆ ತಾವಿಚ್ಛಿಸುವುದೆಲ್ಲವನ್ನೂ ಬೇಡಿಕೊಳ್ಳುತ್ತಾರೆ ಮತ್ತು ಪಾಪಮುಕ್ತಿಯನ್ನೂ ಬೇಡುತ್ತಾರೆ. ಇದನ್ನು ತೀರ್ಪು ನೀಡುವ ದಿನದ ಒಂದು ಪೂರ್ವ ನೋಟವೆಂದು ಭಾವಿಸಲಾಗುತ್ತದೆ.

*ಹಜ್ಜ್* ನ ಕೊನೆಯನ್ನು *ಈದುಲ್ ಅದ್‌ಹಾ* ಎಂಬ ಹಬ್ಬದ ಮೂಲಕ ಗುರುತಿಸಲಾಗಿದೆ. *ಈದುಲ್ ಅದ್‌ಹಾ* ಮತ್ತು ರಮದಾನ್ ತಿಂಗಳ ಕೊನೆಯನ್ನು ಅನುಸ್ಮರಿಸುವ ಸಲುವಾಗಿ ಆಚರಿಸಲಾಗುವ *ಈದುಲ್ ಫಿತ್ರ್* ಮುಸ್ಲಿಮರ ಎರಡು ಹಬ್ಬಗಳಾಗಿವೆ.

## ಇಸ್ಲಾಮ್ ಅಮೇರಿಕಾದಲ್ಲಿ

ಅಮೇರಿಕನ್ ಮುಸ್ಲಿಮರನ್ನು ಸಾಮಾನ್ಯೀಕರಿಸುವುದು ಪ್ರಯಾಸಕರವಾಗಿದೆ. ಅವರಲ್ಲಿ ಮತಾಂತರಗೊಂಡವರು, ವಲಸೆ ಬಂದವರು, ಕಾರ್ಖಾನೆ ಕಾರ್ಮಿಕರು, ವೈದ್ಯರು ಮೊದಲಾದವರು ಇದ್ದಾರೆ. ಇವರೆಲ್ಲರೂ ಒಂದು ಸಮಾನ ವಿಶ್ವಾಸದೊಂದಿಗೆ ಐಕ್ಯರಾಗಿದ್ದಾರೆ.



ಮುಸ್ಲಿಮರು ಮೊಟ್ಟಮೊದಲನೆಯದಾಗಿ ಕಾಲೂರಿದ್ದು ಉತ್ತರ ಅಮೇರಿಕದಲ್ಲಾಗಿತ್ತು. ಹದಿನೆಂಟನೇ ಶತಮಾನದ ಹೊತ್ತಿಗೆ ಉತ್ತರ ಅಮೇರಿಕಾದಲ್ಲಿ ಹಲವಾರು ಮುಸ್ಲಿಮರಿದ್ದರು.

ಅಮೇರಿಕನ್ನರ ಬಹುದೊಡ್ಡ ಸಂಖ್ಯೆಯು ಇಸ್ಲಾಮನ್ನು ಪ್ರವೇಶಿಸಿದೆ. ಅವರು ಶ್ರೀಮಂತ, ಬಡವ, ಸಾಕ್ಷರ, ಅನಕ್ಷರಸ್ಥ ಮೊದಲಾದ ಎಲ್ಲ ವರ್ಗಗಳಿಂದ ಬಂದವರಾಗಿದ್ದಾರೆ. ಪ್ರಸಕ್ತ ಅಮೇರಿಕಾದಲ್ಲಿ ಐದೂವರೆ ದಶಲಕ್ಷ ಮುಸಲ್ಮಾನರಿದ್ದಾರೆ.(ﷺ)[2]

---

1. ಇದು ಮಕ್ಕಾದಿಂದ 15 ಮೈಲಿ ದೂರವಿರುವ ಒಂದು ಪ್ರದೇಶವಾಗಿದೆ.
2. The World Almanac and Book of Facts 1996, Famighetti, p. 644.

# ಆಧಾರ ಗ್ರಂಥಗಳು


Ahrens, C. Donald. 1988. *Meteorology Today*. 3rd ed. St. Paul: West Publishing Company.

Anderson, Ralph K.; and others. 1978. *The Use of Satellite Pictures in Weather Analysis and Forecasting*. Geneva: Secretarial of the World Meteorological Organization.

Anthes, Richard A.; John J. Cahir; Alistair B. Fraser; and Hans A. Panofsky. 1981. *The Atmosphere*. 3rd ed. Columbus: Charles E. Merrill Publishing Company.

Barker, Kenneth; and others. 1985. *The NIV Study Bible*, *New International Version*. Grand Rapids, Michigan: Zondervan Publishing House.

Bodin, Svante. 1978. *Weather and Climate.* Poole, Dorest: Blandford Press Ltd.

Cailleux, Andre'. 1968. *Anatomy of the Earth*. London: World University Library.

Couper, Heather; and Nigel Henbest. 1995. *The Space Atlas*. London: Dorling Kindersley Limited.

Davis, Richard A., Jr. 1972. *Principles of Oceanography*. Don Mills, Ontario: Addison-Wesley Publishing Company.

Douglas, J. D.; and Merrill C. Tenney. 1989. *NIV Compact Dictionary of the Bible*. Grand Rapids, Michigan: Zondervan Publishing House.

Elder, Danny; and John Pernetta. 1991. *Oceans.* London: Mitchell Beazley Publishers.

Famighetti, Robert. 1996. *The World Almanac and Book of Facts 1996.* Mahwah, New Jersey: World Almanac Books.

Gross, M. Grant. 1993. *Oceanography*, a View of Earth. 6th ed. Englewood Cliffs: Prentice-Hall, Inc.

Hickman, Cleveland P.; and others. 1979. *Integrated Principles of Zoology.* 6th ed. St. Louis: The C. V. Mosby Company.

Al-Hilali, Muhammad T.; and Muhammad M. Khan. 1994. *Interpretation of the Meanings of The Noble Qur'an in the English Language.* 4th revised ed. Riyadh: Maktaba Dar-us-Salam.

*The Holy Bible, Containing the Old and New Testaments (Revised Standard Version).* 1971. New York: William Collins Sons & Co., Ltd.

Ibn Hesham, Abdul-Malek. *Al-Serah Al-Nabaweyyah.* Beirut: Dar El-Marefah.

The Islamic Affairs Department, The Embassy of Saudi Arabia, Washington, DC. 1989. *Understanding Islam and the Muslims*. Washington, DC: The Islamic Affairs Department, The Embassy of Saudi Arabia.

Kuenen, H. 1960. *Marine Geology.* New York: John Wiley & Sons, Inc.

Leeson, C. R.; and T. S. Leeson. 1981. *Histology.* 4th ed. Philadelphia: W. B. Saunders Company.

Ludlam, F. H. 1980. *Clouds and Storms.* London: The Pennsylvania State University Press.

Makky, Ahmad A.; and others. 1993. *Ee'jaz al-Qur'an al-Kareem fee Wasf Anwa' al-Riyah, al-Sohob, al-Matar.* Makkah: Commission on Scientific Signs of the Qur'an and Sunnah.

Miller, Albert; and Jack C. Thompson. 1975. *Elements of Meteorology.* 2nd ed. Columbus: Charles E. Merrill Publishing Company.

Moore, Keith L.; E. Marshall Johnson; T. V. N. Persaud; Gerald C. Goeringer; Abdul-Majeed A. Zindani; and Mustafa A. Ahmed. 1992. *Human Development as Described in the Qur'an and Sunnah.* Makkah: Commission on Scientific Signs of the Qur'an and Sunnah.

Moore, Keith L.; A. A. Zindani; and others. 1987. *Al-E'jaz al-Elmy fee al-Naseyah (The scientific Miracles in the Front of the Head).* Makkah: Commission on Scientific Signs of the Qur'an and Sunnah.

Moore, Keith L. 1983. The Developing Human, *Clinically Oriented Embryology, With Islamic Additions.* 3rd ed. Jeddah: Dar Al-Qiblah.

Moore, Keith L.; and T. V. N. Persaud. 1993. *The Developing Human, Clinically Oriented Embryology.* 5th ed. Philadelphia: W. B. Saunders Company.

El-Naggar, Z. R. 1991. *The Geological Concept of Mountains in the Qur'an.* 1st ed. Herndon: International Institute of Islamic Thought.

Neufeldt, V. 1994. *Webster's New World Dictionary*. Third College Edition. New York: Prentice Hall.

*The New Encyclopaedia Britannica*. 1981. 15th ed. Chicago: Encyclopaedia Britannica, Inc.

Noback, Charles R.; N. L. Strominger; and R. J. Demarest. 1991. *The Human Nervous System, Introduction and Review.* 4th ed. Philadelphia: Lea & Febiger.

Ostrogorsky, George. 1969. *History of the Byzantine State*. Translated from the German by Joan Hussey. Revised ed. New Brunswick: Rutgers University Press.

Press, Frank; and Raymond Siever. 1982. *Earth*. 3rd ed. San Francisco: W. H. Freeman and Company.

Ross, W. D.; and others. 1963. *The Works of Aristotle Translated into English: Meteorologica*. vol. 3. London: Oxford University Press.

Scorer, Richard; and Harry Wexler. 1963. *A Colour Guide to Clouds*. Robert Maxwell.

Seeds, Michael A. 1981. Horizons, *Exploring the Universe*. Belmont: Wadsworth Publishing Company.

Seeley, Rod R.; Trent D. Stephens; and Philip Tate. 1996. *Essentials of Anatomy&Physiology.* 2nd ed. St. Louis: Mosby-Year Book, Inc.

Sykes, Percy. 1963. *History of Persia*. 3rd ed. London: Macmillan & CO Ltd.

Tarbuck, Edward J.; and Frederick K. Lutgens. 1982. *Earth Science*. 3rd ed. Columbus: Charles E. Merrill Publishing Company.

Thurman, Harold V. 1988. *Introductory Oceanography.* 5th ed. Columbus: Merrill Publishing Company.

Weinberg, Steven. 1984. *The First Three Minutes, a Modern View of the Origin of the Universe.* 5th printing. New York: Bantam Books.

Al-Zarkashy, Badr Al-Deen. 1990. *Al-Borhan fee Oloom Al-Qur'an.* 1st ed. Beirut: Dar El-Marefah.

Zindani, A. A. *This is the Truth* (videotape). Makkah: Commission on Scientific Signs of the Qur'an and Sunnah.

## ಹದೀಸ್‌ಗಳ ಕ್ರಮಸಂಖ್ಯೆ

ಈ ಪುಸ್ತಕದಲ್ಲಿ ಉಲ್ಲೇಖಿಸಲಾದ ಹದೀಸ್‌ಗಳ ಕ್ರಮಸಂಖ್ಯೆಗೆ ಈ ಕೆಳಗಿನವುಗಳನ್ನು ಅವಲಂಬಿಸಲಾಗಿದೆ.

■ *ಸಹೀಹ್ ಮುಸ್ಲಿಮ್:* ಮುಹಮ್ಮದ್ ಎಫ್. ಅಬ್ದುಲ್ ಬಾಕಿ ನೀಡಿದ ಕ್ರಮಸಂಖ್ಯೆ.

■ *ಸಹೀಹುಲ್ ಬುಖಾರಿ:* ಫತ್‌ಹುಲ್ ಬಾರಿಯಲ್ಲಿರುವ ಕ್ರಮಸಂಖ್ಯೆ.

■ *ತಿರ್ಮಿದಿ:* ಅಹ್ಮದ್ ಶಾಕಿರ್ ನೀಡಿದ ಕ್ರಮಸಂಖ್ಯೆ.

■ *ಮುಸ್ನದ್ ಅಹ್ಮದ್:* ದಾರ್ ಇಹ್ಯಾ ಅತ್ತುರಾಸಿಲ್ ಅರಬೀ, ಬೈರೂತ್ ನೀಡಿದ ಕ್ರಮಸಂಖ್ಯೆ.

■ *ಮುವತ್ತ ಮಾಲಿಕ್:* ಮುವತ್ತ ಮಾಲಿಕ್‌ನಲ್ಲಿರುವ ಕ್ರಮಸಂಖ್ಯೆ.

■ *ಅಬೂದಾವೂದ್:* ಮುಹಮ್ಮದ್ ಮುಹ್ಯಿದ್ದೀನ್ ಅಬ್ದುಲ್ ಹಮೀದ್ ನೀಡಿದ ಕ್ರಮಸಂಖ್ಯೆ.

■ *ಇಬ್ನ್ ಮಾಜ:* ಮುಹಮ್ಮದ್ ಎಫ್. ಅಬ್ದುಲ್ ಬಾಕಿ ನೀಡಿದ ಕ್ರಮಸಂಖ್ಯೆ.

■ *ದಾರಿಮೀ:* ಖಾಲಿದ್ ಅಸ್ಸಬಾ ಅಲ್‌ಆಲಮೀ ಮತ್ತು ಫವ್ವಾಝ್ ಅಹ್ಮದ್ ಝುಮರ್ಲೀ ನೀಡಿದ ಕ್ರಮಸಂಖ್ಯೆ.

